RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮಾರ್ಚ್ ೧೪, ೨೦೧೩ (ಫಾಲ್ಗುಣ ೨೩, ಶಕ ವರ್ಷ ೧೯೩೪)<br>Bangalore, Thursday, March 14, 2013 (Phalguna 23, Shaka Varsha 1934) | ಸಂಚಿಕೆ ೧೧<br>Issue 11 |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27.04.2012.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09.05.2012, 05.06.2012, 25.06.2012, 03.07.2012, 23.07.2012, 06.08.2012 ಮತ್ತು 31.08.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಕ್ರಮಾಂಕ 3ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3 ಕಂಡಿಕೆ–10ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಸಹಾಯಧನ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶೀಸಿದೆ.
6. ಸರ್ಕಾರವು 2012–13ನೇ ಸಾಲಿನ ಸೆಪ್ಟಂಬರ್–2012ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012ಬೆಂಗಳೂರು, ದಿನಾಂಕ 06.09.2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಸೆಪ್ಟಂಬರ್–2012ರ ತಿಂಗಳಿಗೆ ರೂ. 384.00 ಕೋಟಿಗಳ (ರೂ.

ಮುನ್ನೂರ ಎಂಬತ್ತನಾಲ್ಕು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) (ಆರ್.ಇ.ಸಬ್ಸಿಡಿ)" ಲೆಕ್ಕಶೀರ್ಷಿಕೆಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ | 2012–13ರ ಸೆಪ್ಟಂಬರ್ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಬೆವಿಕಂ | 72.00 | 3.00 | **75.00** | 75.00 | 0.00 | 0.00 |
| ಮವಿಕಂ | 29.00 | 1.00 | **30.00** | 20.00 | 10.00 | 0.00 |
| ಹುವಿಕಂ | 144.00 | 5.00 | **149.00** | 52.00 | 28.00 | 69.00 |
| ಗುವಿಕಂ | 71.00 | 4.00 | **75.00** | 33.00 | 2.00 | 40.00 |
| ಚಾವಿಸನಿನಿ | 53.00 | 2.00 | **55.00** | 20.00 | 11.00 | 24.00 |
| **ಒಟ್ಟು** | **369.00** | **15.00** | **384.00** | **200.00** | **51.00** | **133.00** |

* ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ 69.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ.9.00 ಕೋಟಿಗಳೆಂದು ಲೆಕ್ಕೀಕರಿಸುವುದು.

2. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಮೇಲಿನ ಕೋಷ್ಟಕದಲ್ಲಿರುವಂತೆ ಸಹಾಯಧನದ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.
3. ಮೇಲಿನ ಕೋಷ್ಟಕದಲ್ಲಿರುವಂತೆ ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡುಗಡೆ ಮಾಡಿದೆ.
4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
7. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
8. ಈ ಆದೇಶವನ್ನು ಮೇಲೆ ಓದಲಾದ ಕ್ರಮಾಂಕ–3ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.150**

## ಇಂಧನ ಸಚಿವಾಲಯ

**ವಿಷಯ:** 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಹೆಚ್ಚುವರಿ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್‌ಆರ್ 2004 ದಿನಾಂಕ 15–03–2005.

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04–09–2008
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09–05–2012, 05.06.2012, 25.06.2012, 03.07.2012, 23.07.2012, 06.08.2012, 31.08.2012, 06.09.2012 ಮತ್ತು 04.10.2012.
4. ಕವಿನಿನಿ ಪತ್ರ ಸಂಖ್ಯೆ: A1 Q5 D/26 ದಿನಾಂಕ: 26.09.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಹುಗ್ರಾವಿಸಸ/ವಿಸಕಂಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಸರ್ಕಾರವು 2012–13ನೇ ಸಾಲಿನ ಅಕ್ಟೋಬರ್–2012ಕ್ಕೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಕೋರಿಕೆ ಮನ್ನಿಸಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಹೆಚ್ಚುವರಿ ಸಹಾಯಧನ ಬಿಡುಗಡೆ ಮಾಡಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪಾವತಿಸಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 08.10.2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಅಕ್ಟೋಬರ್–2012ರ ತಿಂಗಳಿಗೆ ಹೆಚ್ಚುವರಿ ಸಹಾಯಧನ ರೂ. 150.00 ಕೋಟಿಗಳ (ರೂ. ನೂರಾಐವತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 ವಿದ್ಯುತ್ ಪೂರೈಕೆಗೆ ಸಹಾಯಧನ (ಯೋಜನೇತರ)" ಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ |
|---|---|
| ಬೆವಿಕಂ | 10.00 |
| ಮವಿಕಂ | 5.00 |
| ಹುವಿಕಂ | 65.00 |
| ಗುವಿಕಂ | 45.00 |
| ಚಾವಿಸನಿನಿ | 25.00 |
| **ಒಟ್ಟು** | **150.00** |

2. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಕೋರಿಕೆಯನ್ನು ಪರಿಗಣಿಸಿ ಮೇಲಿನ ಕೋಷ್ಟಕದಲ್ಲಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಮರುಹಂಚಿಕೆ ಮಾಡಿದೆ.
3. ಎಲ್ಲಾ ವಿಸಕಂಗಳು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು ನೀರಾವರಿ ವಿದ್ಯುತ್ ಸ್ಥಾವರಗಳ ಬಾಬ್ತಿಗೆ ಲೆಕ್ಕೀಕರಿಸಲು ಆದೇಶಿಸಿದೆ.
4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆ ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
7. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 1168 Exp-1/2012 ದಿನಾಂಕ: 05.10.2012ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.152**

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 539 ವೆಚ್ಚ–1/2012 ದಿನಾಂಕ 25.04.2012.

4. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ:27.04.12.

5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 771 ವೆಚ್ಚ–1/2012 ದಿನಾಂಕ 29.06.2012.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4. ಕ್ರಮಾಂಕ 4ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.

5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿನ ಆಗಸ್ಟ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012ಬೆಂಗಳೂರು, ದಿನಾಂಕ 22.08.2012**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿನ ಆಗಸ್ಟ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.46.00 ಕೋಟಿ (ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 4 TFP 2012 ದಿನಾಂಕ: 27–04–2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.160**

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002.
3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 539 ವೆಚ್ಚ–1/2012 ದಿನಾಂಕ 25.04.2012.
4. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ:27.04.12.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 771 ವೆಚ್ಚ–1/2012 ದಿನಾಂಕ 29.06.2012.
6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012.
7. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1199 Exp–1/12 ದಿನಾಂಕ 12.10.2012.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.
4. ಕ್ರಮಾಂಕ 4ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿನ ಆಕ್ಟೋಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.50.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012ಬೆಂಗಳೂರು, ದಿನಾಂಕ 25.10.2012**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿನ ಆಕ್ಟೋಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.50.00 ಕೋಟಿ (ಐವತ್ತು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 4 TFP 2012 ದಿನಾಂಕ: 27–04–2012 ಹಾಗೂ ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.162**

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 539 ವೆಚ್ಚ-1/2012 ದಿನಾಂಕ 25.04.2012.

4. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ:27.04.12.

5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 771 ವೆಚ್ಚ-1/2012 ದಿನಾಂಕ 29.06.2012.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2012-13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801-80-101-1-13-106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.
4. ಕ್ರಮಾಂಕ 4ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ-3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012-13ನೇ ಸಾಲಿನ ಸೆಪ್ಟೆಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012ಬೆಂಗಳೂರು, ದಿನಾಂಕ 17.09.2012**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012-13ನೇ ಸಾಲಿನ ಸೆಪ್ಟೆಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.46.00 ಕೋಟಿ (ನಲವತ್ತಾರು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 4 TFP 2012 ದಿನಾಂಕ: 27-04-2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.154**

## ಇಂಧನ ಸಚಿವಾಲಯ

**ವಿಷಯ:** 2012-13ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ-1/2012 ದಿನಾಂಕ 02.04.2012.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ-1/2012 ದಿನಾಂಕ 03.04.2012.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012 ದಿನಾಂಕ: 13.04.2012
4. ಕವಿನಿನಿ ಪತ್ರ ಸಂಖ್ಯೆ: A1 Q5 D/25 ದಿನಾಂಕ: 25.06.2012

**ಪ್ರಸ್ತಾವನೆ:**

1) 2012–13ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–211 **Investment in Power Utility** ಯಡಿ ರೂ.500 ಕೋಟಿಗಳನ್ನು ನಿಗಧಿಪಡಿಸಲಾಗಿದೆ.

2) ಕ್ರಮಾಂಕ 3ರಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.50 ಕೋಟಿಗಳ (ರೂ. ಐವತ್ತು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಿದೆ.

3) ಕರ್ನಾಟಕ ವಿದತ್ ನಿಗಮ ನಿಯಮಿತಕ್ಕೆ ರೂ. 75.00 ಕೋಟಿಗಳ (ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ 28–06–2012**

1. ಮೇಲೆ ವಿವರಿಸಲಾದ ಸನ್ನಿವೇಶಗಳಲ್ಲಿ, ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ 2012–13ನೇ ಸಾಲಿನಲ್ಲಿ ರೂ.75.00 ಕೋಟಿಗಳನ್ನು (ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುತ್ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶಿರ್ಷಿಕೆ "4801–01–190–0–09–211 Investment in Power Utilities (ಯೋಜನೆ)" ಯಡಿ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (**payee's receipts**)ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ಯಾಗಿ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (**Utilization Certificate**) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
4. ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲಕರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ/ವಿನಾಯಿತಿ ನೀಡಿದೆ.
5. ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಮಹಾಲೇಖಪಾಲಕರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಈಆ 47 Exp–I/2012 ದಿನಾಂಕ: 03.04.2012 ರಲ್ಲಿ ನೀಡಿದೆ.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 04 TFP 2012 ದಿನಾಂಕ: 27.04.2012 ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.163**

## ENERGY SECRETARIAT

**Sub**: - Relaxation of Article 17 (c ) (4) of KFC 1957 for the FY 2012-13.

**Read**:- Finance Department U.O. Note NO: FD 471 Exp-I/2012 dated: 03.04.2012.

**Preamble:**

1. As per the Article 17 (c )(4) of KFC 1957, the Accountant General is required to issue the authority of intimation for payment by State Huzur Treasury on account of Government investments in Companies.
2. The Finance Dept has concurred for relaxation of Article 17 (c ) (4) of the Karnataka Financial Code 1957in respect of Investment made in Power Utilities during the Financial Year 2012-13 vide Note No. FD 471 Exp-1/2012 dated 03.04.2012. Hence, the order.

**GOVERNMENT ORDER NO. EN 17 PSR 2012BANGALORE, DATED 6th August 2012**

1. Under the circumstances explained above, Government is pleased to relax the conditions of issuing of Authority of Intimation by Accountant General for payment by Treasuries required under Article 17 (c)(4) of Karnataka Financial Code 1957, on account of Government's Investments under the HOA 4801-01-190-0-09(P) Investment in Power Utilities and HoA 4801-80-190-0-02(P) Investment in ESCOMs for Niranthara Jyothi Works, for the Year 2012-13.
2. This order issued with the concurrence of the Finance Dept vide U.O. Note No.:FD 471 Exp-1/2012 dated 03.04.2012.

BY ORDER AND IN THE NAME OFGOVERNOR OF KARNATAKA,

**KOUSALYA**

UNDER SECRETARY TO GOVERNMENT,

ENERGY DEPARTMENT,

**PR.157**

## ಇಂಧನ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವಬಗ್ಗೆ.

**ಓದಲಾಗಿದೆ:**
1. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ–1/2012 ದಿನಾಂಕ 02.04.2012.
2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ–1/2012 ದಿನಾಂಕ 03.04.2012.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012 ದಿನಾಂಕ: 13.04.2012 ಮತ್ತು 28.06.2012.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012 ದಿನಾಂಕ: 06.08.2012.
5. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ: 27.04.2012.
6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012.

**ಪ್ರಸ್ತಾವನೆ:**

1) 2012–13ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–211 **Investment in Power Utility** ಯಡಿ ರೂ.500 ಕೋಟಿಗಳನ್ನು ನಿಗದಿಪಡಿಸಲಾಗಿದೆ.

2) ಕ್ರಮಾಂಕ 3ರಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.50 ಕೋಟಿಗಳ (ರೂ. ಐವತ್ತು ಕೋಟಿಗಳು ಮಾತ್ರ) ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ.75/– ಕೋಟಿ(ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಿದೆ.

3) ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 65.00 ಕೋಟಿಗಳ (ರೂ. ಅರವತ್ತೈದು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012,ಬೆಂಗಳೂರು, ದಿನಾಂಕ 18–10–2012**

1. ಸರ್ಕಾರವು 2012–13ನೇ ಸಾಲಿನಲ್ಲಿ ರೂ.65.00 ಕೋಟಿಗಳನ್ನು (ರೂ. ಅರವತ್ತೈದು ಕೋಟಿಗಳು ಮಾತ್ರ) ವಿದ್ಯುತ್ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in Power Utilities (ಯೋಜನೆ)" ಯಡಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts)ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ಯಾಗಿ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
4. ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲಕರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.
5. ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಮಹಾಲೇಖಪಾಲಕರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ ಇಎನ್ 17 ಪಿಎಸ್‌ಆರ್ 2012 ದಿನಾಂಕ: 06.08.2012 ರಲ್ಲಿ ನೀಡಿದೆ.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 4 TFP 2012 ದಿನಾಂಕ: 27.04.2012 ಹಾಗೂ FD 8 TFP 2012 ದಿನಾಂಕ: 04.10.2012ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**PR.151**

## . ಇಂಧನ ಸಚಿವಾಲಯ

**ವಿಷಯ:** ವಿತರಣಾ ಕಂಪನಿಗಳಿಗೆ ವಿದ್ಯುತ್ ಮರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಎನ್ 45 ಪಿಎಸ್‌ಆರ್ 2006 ದಿನಾಂಕ: 22.04.2006.
2. ಸರ್ಕಾರದ ಆದೇಶ ಸಂಖ್ಯೆ ಇಎನ್ 70 ಇಎಂಸಿ 2009 ದಿನಾಂಕ: 10.11.2009.
3. ಸರ್ಕಾರದ ಆದೇಶ ಸಂಖ್ಯೆ ಇಎನ್ 126 ಇಎಂಸಿ 2010 ದಿನಾಂಕ: 24.03.2010.
4. ಸರ್ಕಾರದ ಆದೇಶ ಸಂಖ್ಯೆ ಇಎನ್ 126 ಇಎಂಸಿ 2011 ದಿನಾಂಕ: 12.10.2011.

5. ಕವಿನಿ ಆಯೋಗದ ದರ ಆದೇಶ ದಿನಾಂಕ: 28.10.2011.
6. ಸರ್ಕಾರದ ಆದೇಶ ಸಂಖ್ಯೆ:ಇಎನ್ 126 ಇಎಂಸಿ 2010 ದಿನಾಂಕ: 04.01.2012.
7. ಬೆವಿಕಂ ಪತ್ರ ಸಂಖ್ಯೆ: ಪ್ರವ್ಯ (ಪಿ.ಪಿ)/ಬಿಸಿ–39/1067–73 ದಿನಾಂಕ: 22.05.2012.

**ಪ್ರಸ್ತಾವನೆ:**

1. ಮೇಲೆ ಓದಲಾದ ಕ್ರಮಸಂಖ್ಯೆ 4ರ ಆದೇಶದಲ್ಲಿ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಿಗೆ ವಿವಿಧ ಮೂಲಗಳಿಂದ ಖರೀದಿಸುವ ವಿದ್ಯುತ್‌ನ್ನು ಶೇಕಡವಾರು ಮರುಹಂಚಿಕೆ ಪ್ರಮಾಣ ನಿಗಧಿಪಡಿಸಲಾಗಿದೆ.
2. ಮೇಲೆ ಓದಲಾದ ಕ್ರಮಸಂಖ್ಯೆ 4ರಲ್ಲಿ ವಿವಿಧ ವಿಸಕಂಗಳಿಗೆ ಹಂಚಿಕೆ ಮಾಡಿ ತೋರಿಸಿರುವ ವಿದ್ಯುತ್ ಶೇಕಡವಾರು ಪ್ರಮಾಣದ ಒಟ್ಟು ಮೊತ್ತವು 100.01 ಅಥವಾ 99.99 ಆಗುವುದರಿಂದ, ಮೇಲಿನ ಕ್ರಮಸಂಖ್ಯೆ 6ರ ಸರ್ಕಾರಿ ಆದೇಶ ದಿನಾಂಕ: 04.01.2012ರಲ್ಲಿ ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿದೆ.
3. ಸರ್ಕಾರಿ ಆದೇಶ ದಿನಾಂಕ: 12.10.2011ರ ಮರು ಹಂಚಿಕೆ ಪ್ರಮಾಣವನ್ನು ಕವಿನಿ ಆಯೋಗ ದರ ಆದೇಶ ದಿನಾಂಕ: 28.10.2011ರಲ್ಲಿ ಪರಿಗಣಿಸಿ 2011–12ರ ವಾರ್ಷಿಕ ಆದಾಯದ ಅಗತ್ಯತೆ (ARR) ನಿಗಧಿಪಡಿಸಿದೆ.
4. ಬೆವಿಕಂರವರು ಮೇಲೆ 7ರಲ್ಲಿ ಓದಲಾದ ಪತ್ರದಲ್ಲಿ ವಿದ್ಯುತ್ ಮರುಹಂಚಿಕೆ ತಿದ್ದುಪಡಿ ಆದೇಶದಲ್ಲಿರುವ ಅಲ್ಪಾವಧಿ ವಿದ್ಯುತ್ ಖರೀದಿ ಹಂಚಿಕೆ ಮತ್ತು ಕವಿನಿ ಆಯೋಗ ನಿಗಧಿಪಡಿಸಿರುವ ಹಂಚಿಕೆಯಲ್ಲಿನ ವ್ಯತ್ಯಾಸವನ್ನು ಸರಿಪಡಿಸುವಂತೆ ಕೋರಿರುತ್ತಾರೆ.
5. ಕವಿನಿ ಆಯೋಗದ ದರ ಆದೇಶ ದಿನಾಂಕ: 28.10.2011ರಲ್ಲಿ ಆಯೋಗ ಅಲ್ಪಾವಧಿ ವಿದ್ಯುತ್ ಖರೀದಿಯನ್ನು ಮರುಹಂಚಿಕೆ ಮಾಡಿರುವುದನ್ನು ಕಾಣಬಹುದು.
6. ಕ್ರಮ ಸಂಖ್ಯೆ 6ರ ಸರ್ಕಾರಿ ಆದೇಶ ದಿನಾಂಕ: 04.01.2012ರಲ್ಲಿ ಅಲ್ಪಾವಧಿ ವಿದ್ಯುತ್ ಖರೀದಿಯ ಮರುಹಂಚಿಕೆ ತಪ್ಪಾಗಿ ವಿವರಣಾ ಪಟ್ಟಿಯಲ್ಲಿ ಸೇರಿದ್ದು ಮತ್ತು ಕವಿನಿ ಆಯೋಗದ ದರ ಆದೇಶ ದಿನಾಂಕ: 28.10.2011ರಲ್ಲಿನ ಮರುಹಂಚಿಕೆಯ ಪ್ರಮಾಣಕ್ಕೆ ಹೋಲಿಸಿದಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಿದೆ.
7. ಕವಿನಿ ಆಯೋಗ ದರ ಆದೇಶ ದಿನಾಂಕ: 28.10.2011ರಲ್ಲಿ ಅಲ್ಪಾವಧಿ ವಿದ್ಯುತ್ ಖರೀದಿ ಮರುಹಂಚಿಕೆ ಪ್ರಮಾಣವನ್ನು ಪರಿಗಣಿಸಬೇಕಾಗಿದೆ ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 53 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ: 23.08.2012**

ಕರ್ನಾಟಕ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಿಗೆ ವಿವಿಧ ಮೂಲಗಳಿಂದ ದೊರಕುವ ಅಲ್ಪಾವಧಿ ವಿದ್ಯುತ್ ಪ್ರಮಾಣವನ್ನು 2011–12ನೇ ಸಾಲಿಗೆ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ದರ ಆದೇಶ ದಿನಾಂಕ: 28.10.2011 ರಲ್ಲಿ ನಿಗಧಿಪಡಿಸಿರುವ ಪ್ರಮಾಣವನ್ನೇ ಅಂತಿಮವೆಂದು ಪರಿಗಣಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**PR.156**

## ಇಂಧನ ಸಚಿವಾಲಯ

**ವಿಷಯ:** ಬಂಡವಾಳ ಕಾಮಗಾರಿಗಳಿಗೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು ಪಡೆದಿರುವ ಸಾಲಕ್ಕೆ ಸರ್ಕಾರಿ ಖಾತರಿ ಮೇಲೆ ಖಾತರಿ ಕಾರ್ಯ ಶುಲ್ಕ (Commission) ವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಗುವಿಕಂ ಪತ್ರ ಸಂಖ್ಯೆ: GESCOM/CEE(CP)/SEE(MIS)/EEE(TP)/2010-11/1139 ದಿನಾಂಕ: 12.04.2010 ಮತ್ತು 09.02.2011.
2. ಹುವಿಕಂ ಪತ್ರ ಸಂಖ್ಯೆ: HESCOM/AO(B&L)/F-10/2009-10 ದಿನಾಂಕ: 17.05.2010.
3. ಸರ್ಕಾರಿ ಆದೇಶ ಸಂಖ್ಯೆ ಇಎನ್ 67 ಪಿಎಸ್‌ಆರ್ 2009 ದಿನಾಂಕ: 05.05.2011.
4. ಪತ್ರ ಸಂಖ್ಯೆ: ಇಎನ್ 67 ಪಿಎಸ್ ಆರ್ 2009 ದಿನಾಂಕ: 05.05.2011.

**ಪ್ರಸ್ತಾವನೆ:**

1. ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1) ಮತ್ತು (2)ರ ಪತ್ರಗಳಲ್ಲಿ ನಿರಂತರ ಜ್ಯೋತಿ ಕಾಮಗಾರಿಗಳ ಸಲುವಾಗಿ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಲು ಸರ್ಕಾರದಿಂದ ಸರ್ಕಾರಿ ಖಾತರಿ ನೀಡುವಂತೆ ಕೋರಲಾಗಿತ್ತು.
2. 2011–12ನೇ ಸಾಲಿನಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ಕೈಗೊಳ್ಳುವ ಕಾಮಗಾರಿಗಳಿಗೆ ಹಣಕಾಸು ಸಂಸ್ಥೆಗಳಿಂದ ತಲಾ ರೂ.172.80 ಕೋಟಿಗಳಷ್ಟು ಸಾಲವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು ಪಡೆಯಲು ಸರ್ಕಾರಿ ಆದೇಶ ಸಂಖ್ಯೆ: ಇಎನ್ 67 ಪಿಎಸ್‌ಆರ್ 2009 ದಿನಾಂಕ: 05.05.2011ರಲ್ಲಿ ಅನುಮೋದನೆ ನೀಡಲಾಗಿದೆ. ಆರ್ಥಿಕ ಇಲಾಖೆಯು

ನಿಗದಿಪಡಿಸಿರುವ ಖಾತರಿ ಕಾರ್ಯ ಶುಲ್ಕ (Commission) ವನ್ನು ಸರ್ಕಾರಕ್ಕೆ ಪಾವತಿಸತಕ್ಕದ್ದು ಎಂಬ ಷರತ್ತಿಗೊಳಪಟ್ಟು ಸರ್ಕಾರಿ ಖಾತರಿ ನೀಡಲು ಆದೇಶಿಸಲಾಗಿತ್ತು.

3. ಉಲ್ಲೇಖ 4 ರಲ್ಲಿ ಸರ್ಕಾರಕ್ಕೆ ಪಾವತಿಸಬೇಕಾದ ಖಾತರಿ ಕಾರ್ಯ ಶುಲ್ಕದ ಶೇಕಡವಾರು ಮತ್ತು ಷರತ್ತುಗಳ ವಿವರಗಳನ್ನು ಆರ್ಥಿಕ ಇಲಾಖೆ ನಿಗಧಿಪಡಿಸಿದ ನಂತರ ಪ್ರತ್ಯೇಕವಾಗಿ ತಿಳಿಸಲಾಗುವುದೆಂದು ಸೂಚಿಸಲಾಗಿತ್ತು.

4. ಅದರಂತೆ ಈ ವಿಷಯವನ್ನು ಪರಿಶೀಲಿಸಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು ಖಾತರಿ ಕಾರ್ಯ ಶುಲ್ಕವನ್ನು (Commission) ಸರ್ಕಾರಕ್ಕೆ ಪಾವತಿಸಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 67 ಪಿಎಸ್ಆರ್ 2009 ಬೆಂಗಳೂರು, ದಿನಾಂಕ: 03.10.2012**

1. 2011–12ನೇ ಸಾಲಿನಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ಕೈಗೊಳ್ಳುವ ಕಾಮಗಾರಿಗಳಿಗೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಯು ಸರ್ಕಾರಿ ಖಾತರಿ ಆಧಾರದ ಮೇಲೆ ಹಣಕಾಸು ಸಂಸ್ಥೆಗಳಿಂದ ಪಡೆಯುವ ತಲಾ ರೂ. 172.80 ಕೋಟಿ (ನೂರ ಎಪ್ಪತ್ತೆರಡು ಕೋಟಿ ಮತ್ತು ಎಂಬತ್ತು ಲಕ್ಷಗಳು ಮಾತ್ರ) ಸಾಲದ ಮೊತ್ತದ ಮೇಲೆ ಶೇಕಡ 1ರಷ್ಟು ಖಾತರಿ ಕಾರ್ಯ ಶುಲ್ಕವನ್ನು (Commission) ಆರ್ಥಿಕ ಇಲಾಖೆಯ The Karnataka Ceiling on Government Gurantees Act 1999ರ ಪ್ರಕಾರ ಹಾಗೂ ಸರ್ಕಾರದ ಆದೇಶದ ಸಂಖ್ಯೆ: FD 6 RLG 2002 ದಿನಾಂಕ: 17.09.2002ರಲ್ಲಿ ನಿಗದಿಪಡಿಸಿರುವಂತೆ ಪಾವತಿಸತಕ್ಕದ್ದು.
2. ಈ ಆದೇಶವನ್ನು ಆ.ಇ ಟಿಪ್ಪಣಿ ಸಂಖ್ಯೆ: FD 905 Exp-1/2011 ದಿನಾಂಕ: 05.09.2012ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

PR.153

**ಇಂಧನ ಸಚಿವಾಲಯ**

**ವಿಷಯ:** ರಾಜ್ಯದಲ್ಲಿರುವ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 09 ಪಿಎಸ್ಆರ್ 2011 ದಿನಾಂಕ: 11.03.2011.

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್ಆರ್ 2012 ದಿನಾಂಕ: 06.08.2012.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 67 ಪಿಎಸ್ಆರ್ 2012 ದಿನಾಂಕ: 06.09.2012.

**ಪ್ರಸ್ತಾವನೆ:**

1. 2012–13ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ರಾಜ್ಯದಲ್ಲಿರುವ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ಬಂಡವಾಳ ಹೂಡಿಕೆಗೆ 2012–13ರಲ್ಲಿಯೂ ಸಹ ಉತ್ತೇಜನ ಕೊಡುವುದಾಗಿ ತಿಳಿಸಿದೆ. ವಿದ್ಯುತ್ ಸರಬರಾಜು ಕಂಪನಿಗಳು ಜುಲೈ 2012ರ ಅಂತ್ಯಕ್ಕೆ 105416 ಅನಧಿಕೃತ ಪಂಪ್‌ಸೆಟ್‌ಗಳನ್ನು ಸಕ್ರಮೀಕರಣ ಮಾಡಿರುತ್ತಾರೆ. ಈ ಸಕ್ರಮೀಕರಣಕ್ಕೆ ರೂ.263.54 ಕೋಟಿಗಳನ್ನು ಭರಸಬೇಕಾಗಿರುತ್ತದೆ. ಇದರಲ್ಲಿ ರೂ.100 ಕೋಟಿಗಳನ್ನು 2011–12ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದೆ. ಬಾಕಿ ಉಳಿದಿರುವ ರೂ. 163.54 ಕೋಟಿಗಳನ್ನು ಪ್ರಸ್ತುತ ಸಾಲಿನಲ್ಲಿ ಬಿಡುಗಡೆ ಮಾಡಬೇಕಾಗಿರುತ್ತದೆ.
2. 2012–13ನೇ ಸಾಲಿನ ಆಯವ್ಯಯದಲ್ಲಿ ವಿದ್ಯುಚ್ಛಕ್ತಿ ವಲಯದಲ್ಲಿ ಬಂಡವಾಳ ಹೂಡಿಕೆಗಾಗಿ ರೂ.500 ಕೋಟಿಗಳನ್ನು ಒದಗಿಸಿರುತ್ತದೆ. ಈ ರೂ.500 ಕೋಟಿಗಳಲ್ಲಿ ರೂ. 205 ಕೋಟಿಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ಕ್ರಮವಾಗಿ ರೂ.50, ರೂ.75, ರೂ.20, ರೂ.15, ರೂ.20, ರೂ.5 ಮತ್ತು ರೂ.20 ಕೋಟಿಗಳನ್ನು ಬಂಡವಾಳ ಹೂಡಿಕೆಗಾಗಿ ಈಗಾಗಲೆ ಬಿಡುಗಡೆ ಮಾಡಲಾಗಿದೆ.
3. ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 11.03.2011ರಲ್ಲಿ ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಅಕ್ರಮ ನೀರಾವರಿ ವಿದ್ಯುತ್ ಪಂಪ್‌ಸೆಟ್‌ಗಳನ್ನು ಸದರಿ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಸಕ್ರಮಗೊಳಿಸಲು ಆದೇಶಿಸಿದೆ. ಪ್ರತಿ ಪಂಪ್‌ಸೆಟ್‌ನ ಸಕ್ರಮೀಕರಣಕ್ಕಾಗಿ ತಗಲುವ ವೆಚ್ಚದ ರೂ.25 ಸಾವಿರಗಳನ್ನು ಸರ್ಕಾರ ಭರಿಸುವುದಾಗಿ ತಿಳಿಸಿದೆ.
4. ಈ ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕೆ ಎಲ್ಲಾ ವಿತರಣಾ ಕಂಪನಿಗಳಲ್ಲಿ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ರೂ.20 ಕೋಟಿಗಳ ಬಂಡವಾಳ ಬಿಡುಗಡೆಗಾಗಿ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 67 ಪಿಎಸ್ಆರ್ 2012 ಬೆಂಗಳೂರು, ದಿನಾಂಕ 18.10.2012**

1. ರಾಜ್ಯದ ಎಲ್ಲಾ ವಿತರಣಾ ಕಂಪನಿಗಳ ವ್ಯಾಪ್ತಿಯಲ್ಲಿ ದಿನಾಂಕ:31.07.2012ರವರೆಗೆ ನೊಂದಾಯಿಸಿರುವ 10 ಅಶ್ವಶಕ್ತಿ (10 ಅಶ್ವಶಕ್ತಿ ಒಳಗೊಂಡಿರುವ)ವರೆಗಿನ ಅನಧಿಕೃತ ಪಂಪ್ ಸೆಟ್‌ಗಳ ಸಕ್ರಮೀಕರಣಕ್ಕಾಗಿ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ಬಂಡವಾಳ ಒದಗಿಸಲು ರೂ.20.00 ಕೋಟಿಗಳನ್ನು ಲೆಕ್ಕಶೀರ್ಷಿಕೆ HoA 4801-01-190-0-09 211 (Plan) ರಲ್ಲಿ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ. ಸಂಖ್ಯೆ. | ಕಂಪನಿಗಳ ಹೆಸರು | ಬಿಡುಗಡೆಗೊಳಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 4.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 4.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 4.00 |
| 4 | ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ | 4.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 4.00 |
| | **ಒಟ್ಟು ಮೊತ್ತ** | **20.00** |

2. ವಿದ್ಯುತ್ ಸರಬರಾಜು ಕಂಪನಿಗಳು ಹಣ ಸ್ವೀಕೃತ ರಶೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣವನ್ನು ಪಡೆಯತಕ್ಕದ್ದು.
3. ವಿದ್ಯುತ್ ಸರಬರಾಜು ಕಂಪನಿಗಳು ಬಿಡುಗಡೆ ಮಾಡಿದ ಮೊಬಲಗು ಸಕ್ರಮೀಕರಣದ ಮೂಲಭೂತ ಸೌಕರ್ಯಕ್ಕಾಗಿಯೇ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (Utilization Certificate) ನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
4. ಸಕ್ರಮಗೊಳಿಸುವ ಎಲ್ಲಾ 10 ಅಶ್ವಶಕ್ತಿ (10 ಅಶ್ವಶಕ್ತಿ ಒಳಗೊಂಡು) ವರೆಗಿನ ಅನಧಿಕೃತ ಪಂಪ್ ಸೆಟ್‌ಗಳ ಪರಿವೀಕ್ಷಣೆ (ರೇಟಿಂಗ್) ಮಾಡಿ ಅದರ ಅಶ್ವಶಕ್ತಿಯನ್ನು ಖಚಿತಪಡಿಸಿಕೊಳ್ಳಬೇಕು. 10 ಅಶ್ವಶಕ್ತಿ ಮೇಲ್ಪಟ್ಟ ವಿದ್ಯುತ್ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಪರಿವರ್ತಕ ಕೇಂದ್ರ (Distribution Transformer Centers) ಗಳಿಗೆ ಬದಲಾಗಿ ಪ್ರತಿ ಪಂಪ್‌ಸೆಟ್ಟಿಗೂ ಮೀಟರ್ ಅಳವಡಿಸುವುದು.
5. ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ/ವಿನಾಯಿತಿ ನೀಡಿದೆ.
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್ಆರ್ 2012 ದಿನಾಂಕ: 06.08.2012ರಲ್ಲಿ ಮಹಾಲೇಖಪಾಲಕರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ನೀಡಿದೆ.
7. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ:27.04.2012 ಮತ್ತು ಎಫ್‌ಡಿ 08 ಟಿಎಫ್‌ಪಿ/2012 ದಿನಾಂಕ: 04.10.2012ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

PR.161

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2012–13ರ ಹಣಕಾಸು ವರ್ಷದಲ್ಲಿ ಎರಡನೇ ತ್ರೈಮಾಸಿಕ ಅವಧಿಗೆ ಕಂತು ಸಹಾಯಾನುದಾನದ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/01/3/1260 ದಿನಾಂಕ 18.07.2012.
2. ಸರ್ಕಾರದ ಆದೇಶ ಸಂಖ್ಯೆ: **ಇಎನ್** 19 **ಪಿಎಸ್ಆರ್** 2012 **ದಿನಾಂಕ** 02–06–2012.

**ಪ್ರಸ್ತಾವನೆ:**

1. 2012–13 ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ.425.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಅದರಂತೆ ದಿನಾಂಕ 02–06–2012ರ ಮೇಲಿನ ಆದೇಶದಲ್ಲಿ ಮೊದಲ ಕಂತಿನ ಅನುದಾನವಾದ ರೂ.106.25 ಲಕ್ಷಗಳನ್ನು ಕವಿನಿ ಆಯೋಗಕ್ಕೆ ಬಿಡುಗಡೆ ಮಾಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2012–13 ನೇ ಸಾಲಿಗೆ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ.106.25 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2012ಬೆಂಗಳೂರು, ದಿನಾಂಕ 09–08–2012**

ಸರ್ಕಾರವು 2012–13ನೇ ಹಣಕಾಸು ವರ್ಷದ ಎರಡನೇ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ.106.25/– ಲಕ್ಷ (ಒಂದು ನೂರ ಆರು ಲಕ್ಷ ಮತ್ತು ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

PR.158

## ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್‌ಆರ್ 2004 ದಿನಾಂಕ 15–03–2005
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04–09–2008
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09–05–2012, 05.06.2012 ಮತ್ತು 25.06.2012.
5. ಬೆವಿಕಂ ವ್ಯ.ನಿ.ಪತ್ರ ಸಂಖ್ಯೆ ಪ್ರ.ವ್ಯ.(ಪಿಪಿ)/ಬಿಸಿ–39/2012–13 ದಿನಾಂಕ 02.07.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಹುಗ್ರಾವಿಸಸ/ವಿಸಕಂಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಕ್ರಮಾಂಕ 3ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3 ಕಂಡಿಕೆ–10ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಸಹಾಯಧನ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.
6. ಸರ್ಕಾರವು 2012–13ನೇ ಸಾಲಿನ ಜುಲೈ–2012ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 03–07–2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಜುಲೈ–2012ರ ತಿಂಗಳಿಗೆ ರೂ. 381.00 ಕೋಟಿಗಳ (ರೂ. ಮುನ್ನೂರ ಎಂಬತ್ತೊಂದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) (ಆರ್.ಇ.ಸಬ್ಸಿಡಿ)"ಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ. ಕೋಟಿಗಳಲ್ಲಿ)**

| ವಿಸಕಂ | 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ | 2012–13ರ ಜುಲೈ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|---|
| ಬೆವಿಕಂ | 47.00 | 3.00 | **50.00** | 50.00 | 0.00 | 0.00 |
| ಮವಿಕಂ | 34.00 | 1.00 | **35.00** | 26.00 | 9.00 | 0.00 |

| ವಿಸಕಂ | 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟಿರಜ್ಯೋತಿ ಸ್ಥಾವರಗಳಿಗೆ | 2012–13ರ ಜುಲೈ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|---|
| ಹುವಿಕಂ | 150.00 | 6.00 | **156.00** | 71.00 | 25.00 | 60.00 |
| ಗುವಿಕಂ | 77.00 | 3.00 | **80.00** | 38.00 | 2.00 | 40.00 |
| ಚಾವಿಸನಿನಿ | 58.00 | 2.00 | **60.00** | 20.00 | 10.00 | 30.00 |
| **ಒಟ್ಟು** | **366.00** | **15.00** | **381.00** | **205.00** | **46.00** | **130.00** |

2. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಮೇಲಿನ ಕೋಷ್ಟಕದಲ್ಲಿರುವಂತೆ ಸಹಾಯಧನದ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

3. ಮೇಲಿನ ಕೋಷ್ಟಕದಲ್ಲಿರುವಂತೆ ಮವಿಕಂ, ಹುವಿಕಂ, ಗುವಿಕಂ ಮತ್ತು ಚಾವಿಸನಿಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡುಗಡೆ ಮಾಡಿದೆ.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಮೇಲೆ ಓದಲಾದ ಕ್ರಮಾಂಕ–3ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

PR.159

## ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09.05.2012, 05.06.2012, 25.06.2012, 03.07.2012, 23.07.2012, 06.08.2012, 31.08.2012, 06.09.2012, 04.10.2012, 08.10.2012, 02.11.2012 15.11.2012 ಮತ್ತು 14.12.2012

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.

4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

5. ಸರ್ಕಾರವು 2012–13ನೇ ಸಾಲಿನ ಜನವರಿ–2013ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 11–01–2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಜನವರಿ–2013ರ ತಿಂಗಳಿನಲ್ಲಿ ರೂ. **250/–** ಕೋಟಿಗಳ (ಕೋಟಿ ರೂ. ಇನ್ನೂರ ಐವತ್ತು ರೂಪಾಯಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಮತ್ತು ಹುಕ್ಕೇರಿ ಗ್ರಾಮೀಣಾ ವಿದ್ಯುತ್ ಸಹಕಾರ ಸಂಘಕ್ಕೆ ವಿದ್ಯುತ್ ಪೂರೈಕೆಗೆ ಸಹಾಯಧನ (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿದೆ.

**(ರೂ. ಕೋಟಿಗಳಲ್ಲಿ)**

| **ವಿಸಕಂ** | **10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ** | **2012–13ರ ಜನವರಿ 2013ರ ಮಾಹೆಗೆ ಬಿಡುಗಡೆ** | **ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ** | **ವಿಸಕಂಗಳಿಗೆ ನೇರ ಬಿಡುಗಡೆ** | **ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ** | **ವಿಸಕಂಗಳ ಪರವಾಗಿ ಚಾವಿಸನಿನಿಗೆ ನೇರ ಬಿಡುಗಡೆ** |
|---|---|---|---|---|---|---|---|
| 1 | 2 | 3 | 4 | 5 | 7 | 8 | 9 |
| ಬೆವಿಕಂ | 33.00 | 2.00 | **35.00** | 35.00 | 0.00 | 0.00 | 0.00 |
| ಮವಿಕಂ | 16.00 | 0.00 | **16.00** | 6.00 | 0.00 | 5.00 | 5.00 |
| ಹುವಿಕಂ | 99.00 | 3.00 | **102.00** | 45.00 | 32.00* | 22.00 | 3.00 |
| ಗುವಿಕಂ | 55.00 | 2.00 | **57.00** | 40.00 | 15.00 | 1.00 | 1.00 |
| ಚಾವಿಸನಿನಿ | 39.00 | 1.00 | **40.00** | 15.00 | 15.00 | 10.00 | 0.00 |
| **ಒಟ್ಟು** | **242.00** | **8.00** | **250.00** | **141.00** | **62.00** | **38.00** | **9.00** |

2. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

3. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ **32/–**ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. **2/–**ಕೋಟಿಗಳೆಂದು ಲೆಕ್ಕೀಕರಿಸುವುದು.

4. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಸಹಾಯಧನವನ್ನು ಮೇಲಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿದೆ.

5. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳ ಪರವಾಗಿ ಬೆವಿಕಂಗೆ ಬಿಡುಗಡೆ ಮಾಡಿರುವ ರೂ. **38/–**ಕೋಟಿಗಳ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL) ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚದ ಬಾಬ್ತು ಆಗಿರುತ್ತದೆ.

6. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. **9/–**ಕೋಟಿಗಳ ಸಹಾಯಧನವನ್ನು JSW ದಿಂದ ಖರೀದಿಸಿರುವ ವಿದ್ಯುತ್ ಖರೀದಿ ವೆಚ್ಚ ಬಾಬ್ತು ಆಗಿರುತ್ತದೆ.

7. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 141/–ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

10. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

11. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ 11 ವೆಚ್ಚ–1/13 ದಿನಾಂಕ 10.01.2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.133**

## ಇಂಧನ ಸಚಿವಾಲಯ

**ವಿಷಯ:** 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನದ ಬಾಕಿ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್‌ಆರ್ 2004 ದಿನಾಂಕ 15–03–2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04–09–2008
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09–05–2012, 05.06.2012, 25.06.2012, 03.07.2012, 23.07.2012 ಮತ್ತು 06.08.2012.
5. ಕವಿನಿನಿ ಪತ್ರ ಸಂಖ್ಯೆ: A1 Q5 D/17 ದಿನಾಂಕ: 16.08.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿದ್ಯುತ್ ಸರಬರಾಜು ಕಂಪನಿಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಕ್ರಮಾಂಕ 3ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3 ಕಂಡಿಕೆ–10ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಸಹಾಯಧನ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶೀಸಿದೆ.
6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸಂಸ್ಥೆಯು ತನ್ನ ದಿನಾಂಕ: 16.08.2012ರ ಪತ್ರದಲ್ಲಿ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಿಂದ ಬರಬೇಕಾದ ವಿದ್ಯುತ್ ಬಾಕಿ ರೂ8426 ಕೋಟಿ ಇದ್ದು ತಕ್ಷಣ ರೂ.500 ಕೋಟಿ ಬಿಡುಗಡೆ ಮಾಡಲು ಕೋರಿದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ವಿದ್ಯುತ್ ಸರಬರಾಜು ಕಂಪನಿಗಳು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪಾವತಿ ಮಾಡಬೇಕಾಗಿರುವ ವಿದ್ಯುತ್ ಖರೀದಿ ಬಾಕಿ ಬಾಬ್ತು ರೂ.250 ಕೋಟಿಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲು ನಿರ್ಧರಿಸಿದೆ.

7. ಅದರಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ನಿಗದಿಪಡಿಸಿರುವ ಸಹಾಯಧನದ ಬಾಕಿ ಬಾಬ್ತು ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012ಬೆಂಗಳೂರು, ದಿನಾಂಕ 31.08.2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡಿರುವುದಕ್ಕಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ನಿಗದಿ ಪಡಿಸಿರುವ ಬಾಕಿ ಸಹಾಯಧನದ ಬಾಬ್ತು ರೂ. 250.00 ಕೋಟಿಗಳ (ರೂ. ಇನ್ನೂರ ಐವತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ "2801–80–101–1–04–106 ಅಡಿಯಲ್ಲಿ (ಸಹಾಯಧನ) (ಯೋಜನೇತರ) (ಆರ್.ಇ.ಸಬ್ಸಿಡಿ)" ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ |
|---|---|
| ಬೆವಿಕಂ | 88.00 |
| ಮವಿಕಂ | 8.00 |
| ಹುವಿಕಂ | 129.00 |
| ಗುವಿಕಂ | 25.00 |
| ಚಾವಿಸನಿನಿ | 0.00 |
| **ಒಟ್ಟು** | 250.00 |

2. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ವಿದ್ಯುತ್ ಸರಬರಾಜು ಕಂಪನಿಗಳು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪಾವತಿ ಮಾಡಬೇಕಾದ ವಿದ್ಯುತ್ ಖರೀದಿ ವೆಚ್ಚದ ಬಾಕಿ ಬಾಬ್ತಿಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಕೋರಿಕೆಯಂತೆ ಮೇಲಿನ ಕೋಷ್ಟಕದಲ್ಲಿರುವಂತೆ ನೇರವಾಗಿ ಬಿಡುಗಡೆ ಮಾಡಿದೆ.
3. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು ನೀರಾವರಿ ವಿದ್ಯುತ್ ಸ್ಥಾವರಗಳ ಬಾಬ್ತಿಗೆ ಲೆಕ್ಕೀಕರಿಸಲು ಆದೇಶಿಸಿದೆ.
4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆ ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
7. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
8. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 1054 Exp-1/2012 ದಿನಾಂಕ: 30.08.2012ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR.155**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ ಇಲಾಖೆಯ ವೈದ್ಯರುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡುತ್ತಿರುವ ಸರಿಸಮಾನ, ವೇತನಶ್ರೇಣಿ, ಭತ್ಯೆ, ಇತರೆ ಸೌಲಭ್ಯಗಳು, ಸ್ಥಾನಮಾನಗಳು ಹಾಗೂ ಕಾಲಕಾಲಕ್ಕೆ ಅವರಿಗೆ ನೀಡಲಾಗುವ ಎಲ್ಲಾ ಸವಲತ್ತುಗಳನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

(1) ಕರ್ನಾಟಕ ರಾಜ್ಯ ಸರ್ಕಾರಿ ಆಯುಷ್ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು, ಇವರ ಪತ್ರ ದಿನಾಂಕ:20.06.2011.

(2) ಟಾಸ್ಕ್‌ಫೋರ್ಸ್ ನೀಡಿದ ವರದಿ ದಿನಾಂಕ:10.01.2002.

(3) ಆಯುಷ್ ನಿರ್ದೇಶಕರ ಪತ್ರ ಸಂ:ಆಯುಷ್/46/ಸಿಬ್ಬಂದಿ(4)/2009–10 ದಿನಾಂಕ:5.3.2011.

(4) ದಿನಾಂಕ:10.01.2013ರ ಸಚಿವ ಸಂಪುಟ ಸಭೆಯ ವಿಷಯ ಸಂಖ್ಯೆ:ಸಿ:47/2013ರಲ್ಲಿ ತೆಗೆದುಕೊಂಡ ತೀರ್ಮಾನ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1)ರ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ಆಯುಷ್ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು ಇವರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅಲೋಪತಿ ವೈದ್ಯರುಗಳಿಗೆ ಮತ್ತು ಆಯುಷ್ ವೈದ್ಯರುಗಳಿಗೆ, ವೈದ್ಯಕೀಯ ಕೋರ್ಸಿಗೆ ಸೇರಲು ನಿಗಧಿ ಪಡಿಸಿರುವ ವಿದ್ಯಾರ್ಹತೆ, ವಿದ್ಯಾಭ್ಯಾಸದ ಅವಧಿ ಮತ್ತು ವೈದ್ಯರುಗಳ ನೇರ ನೇಮಕಾತಿಯ ಆಯ್ಕೆಗೆ ನಿಗಧಿಪಡಿಸಿರುವ ಕನಿಷ್ಠ ವಿದ್ಯಾರ್ಹತೆಯು ಒಂದೇ ಆಗಿದ್ದು, ಈ ಎರಡೂ ಹುದ್ದೆಗಳ ಕರ್ತವ್ಯ ಮತ್ತು ಜವಾಬ್ದಾರಿಗಳು ಒಂದೇ ಆಗಿದ್ದರೂ ಸಹ, ವೇತನ ಶ್ರೇಣಿಯಲ್ಲಿ, ಸ್ಥಾನಮಾನಗಳಲ್ಲಿ, ಬಹಳಷ್ಟು ತಾರತಮ್ಯಗಳಿರುವುದರಿಂದ, ಅಲೋಪತಿ ವೈದ್ಯರುಗಳಿಗೆ ಸರಿಸಮಾನವಾದ ವೇತನಶ್ರೇಣಿ, ಭತ್ಯೆ, ಇತರೆ ಸೌಲಭ್ಯಗಳು, ಸ್ಥಾನಮಾನಗಳು ಹಾಗೂ ಕಾಲಕಾಲಕ್ಕೆ ಅವರಿಗೆ ನೀಡಲಾಗುವ ಎಲ್ಲಾ ಸೌಲಭ್ಯ/ಸವಲತ್ತುಗಳನ್ನು ಆಯುಷ್ ವೈದ್ಯರುಗಳಿಗೂ ವಿಸ್ತರಿಸಬೇಕೆಂದು ಹಾಗೂ ಆಯುಷ್ ವೈದ್ಯರನ್ನೂ ಸಹ ಗ್ರೂಪ್ "ಎ" ವೃಂದಕ್ಕೆ ಸೇರಿಸುವುದರ ಮೂಲಕ ಈಗ ಉಂಟಾಗಿರುವ ತಾರತಮ್ಯವನ್ನು ನಿವಾರಿಸುವಂತೆ ಸರ್ಕಾರಕ್ಕೆ ಬೇಡಿಕೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರಲ್ಲಿನ, ಡಾ॥ಹೆಚ್.ಸುದರ್ಶನ್‌ರವರ ಅಧ್ಯಕ್ಷತೆಯಲ್ಲಿ ಸ್ಥಾಪಿತವಾಗಿದ್ದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ "ಕಾರ್ಯಪಡೆ"ಯೂ (Task Force) ಸಹ, ಸರ್ಕಾರಕ್ಕೆ ಸಲ್ಲಿಸಿದ ತನ್ನ ವರದಿಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯರುಗಳಿಗೆ ನೀಡುವ ವೇತನ ಇತ್ಯಾದಿ ಸ್ಥಾನಮಾನಗಳನ್ನು ಆಯುಷ್ ವೈದ್ಯರುಗಳಿಗೆ ವಿಸ್ತರಿಸುವುದು ಪ್ರಮುಖವಾಗಿದೆ ಎಂದು ಶಿಫಾರಸ್ಸು ಮಾಡಿರುತ್ತದೆ.

ಈ ಹಿಂದೆ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನಶ್ರೇಣಿ ರೂಪಿಸಲು ರಚಿತವಾದ 5ನೇ ವೇತನ ಆಯೋಗಕ್ಕೆ, ಅಲೋಪತಿ ವೈದ್ಯರುಗಳಿಗೆ ನೀಡಿರುವ/ನೀಡುವ ವೇತನಶ್ರೇಣಿಯನ್ನು ಆಯುಷ್ ವೈದ್ಯರುಗಳಿಗೂ ನೀಡುವಂತೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಅದರನ್ವಯ 5ನೇ ವೇತನ ಆಯೋಗವು ದಿನಾಂಕ:22.05.2007ರಂದು ಸಲ್ಲಿಸಿದ ವರದಿಯಲ್ಲಿ ಆಯುಷ್ ಇಲಾಖೆಯ ವೈದ್ಯರು ದರ್ಜೆ–2 ವೃಂದದ ವೇತನ ಶ್ರೇಣಿಯನ್ನು ರೂ:11,400–21,600 ರಿಂದ ರೂ:13,000–23850ಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿದ್ದು, ಅದನ್ನು ದಿನಾಂಕ:1.8.2008 ರಿಂದ ಕಾರ್ಯರೂಪಕ್ಕೆ ತರಲಾಗಿತ್ತು. ಆದರೂ ಸಹ ಅಲೋಪತಿ ಮತ್ತು ಆಯುಷ್ ವೈದ್ಯರುಗಳ ವೇತನ ಶ್ರೇಣಿಗಳಲ್ಲಿ ತಾರತಮ್ಯವು ಹಾಗೆಯೇ ಮುಂದುವರಿದಿತ್ತು.

ಇದೇ ವಿಷಯದಲ್ಲಿ 2011ರಲ್ಲಿ ರಚಿತವಾದ ಅಧಿಕಾರಿ ವೇತನ ಸಮಿತಿ ಮುಂದೆ ಪ್ರಸ್ತಾವನೆ ಸಲ್ಲಿಸಿದಾಗ್ಯೂ ಕೂಡ ಸದರಿ ಸಮಿತಿಯು ಈ ವಿಷಯವನ್ನು ಪರಿಗಣಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಷ್ ಇಲಾಖೆಯ ನಿರ್ದೇಶಕರು ಈ ಕೆಳಗಿನ ಸಮರ್ಥನೆಯೊಂದಿಗೆ ಅಲೋಪತಿ ವೈದ್ಯರುಗಳಿಗೆ ನೀಡಲಾಗುತ್ತಿರುವ ವೇತನಶ್ರೇಣಿ ಮತ್ತು ಇತರೆ ಸವಲತ್ತುಗಳನ್ನು ಆಯುಷ್ ವೈದ್ಯರುಗಳಿಗೂ ಮಂಜೂರು ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

(ಅ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅಲೋಪತಿ ವೈದ್ಯರುಗಳು ಹೊಂದಿರುವ ಎಂ.ಬಿ.ಬಿ.ಎಸ್., ಪದವಿಯಂತೆ ಆಯುಷ್ ವೈದ್ಯರುಗಳು ಪಡೆಯುವ ಪದವಿಗಳು ಅಂದರೆ ಬಿ.ಎ.ಎಂ.ಎಸ್, ಬಿ.ಎನ್.ವೈ.ಎಸ್, ಬಿ.ಯು.ಎಂ.ಎಸ್ ಮತ್ತು ಬಿ.ಹೆಚ್.ಎಂ.ಎಸ್. ಕೋರ್ಸುಗಳ ಅವಧಿ ಐದೂವರೆ ವರ್ಷಗಳಾಗಿರುತ್ತವೆ.

(ಆ) ಎಂ.ಬಿ.ಬಿ.ಎಸ್. ಮತ್ತು ಆಯುಷ್ ಕೋರ್ಸ್‌ಗಳ ಪ್ರವೇಶಕ್ಕೆ ನಿಗಧಿಪಡಿಸಿದ ಕನಿಷ್ಟ ವಿದ್ಯಾರ್ಹತೆಯು ಪಿ.ಯು.ಸಿ.(ವಿಜ್ಞಾನ) ಆಗಿದ್ದು ವಿಶ್ವವಿದ್ಯಾಲಯವೂ ಒಂದೇ ಆಗಿರುತ್ತದೆ.

(ಇ) ಕೇಂದ್ರ ಸರ್ಕಾರ ಮತ್ತು ಇತರೆ ಕೆಲವು ರಾಜ್ಯ ಸರ್ಕಾರಗಳ ಸೇವೆಯಲ್ಲಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳ ವೇತನ ಶ್ರೇಣಿ ಒಂದೇ ಆಗಿರುತ್ತದೆ.

(ಈ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಇಲಾಖೆಯ ಅಲೋಪತಿ ವೈದ್ಯರುಗಳಂತೆ, ಆಯುಷ್ ಇಲಾಖೆಯ ವೈದ್ಯರುಗಳೂ ಸಹ ಗ್ರಾಮಾಂತರ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ.

(ಉ)ಅಲೋಪತಿ ವೈದ್ಯಕೀಯ ಕಾಲೇಜುಗಳ ಬೋಧಕ ಸಿಬ್ಬಂದಿಗೆ ನೀಡುವ AICTE ವೇತನ ಶ್ರೇಣಿಯನ್ನು ಆಯುಷ್ ಬೋಧಕ ಸಿಬ್ಬಂದಿಗೂ ಸಹ ನೀಡಲಾಗುತ್ತಿದೆ.

ಆಯುಷ್ ಇಲಾಖೆಯ ವೈದ್ಯರು ಹಾಗೂ ಅಲೋಪತಿ ವೈದ್ಯರುಗಳಿಗೆ ಇರುವ ವೇತನ ತಾರತಮ್ಯ ಈ ಕೆಳಗಿನಂತಿರುತ್ತದೆ; (ಅಧಿಕಾರಿ ವೇತನ ಸಮಿತಿ–2011ರ ವರದಿಯಂತೆ)

| ಕ್ರ.ಸಂ. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ | | ಆಯುಷ್ ಇಲಾಖೆ | |
|---|---|---|---|---|
| | ವೃಂದದ ಹೆಸರು | ಪ್ರಸ್ತುತ ವೇತನ ಶ್ರೇಣಿ | ವೃಂದದ ಹೆಸರು | ಪ್ರಸ್ತುತ ವೇತನ ಶ್ರೇಣಿ |
| 1 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ಸಹಾಯಕ ಶಸ್ತ್ರ ಚಿಕಿತ್ಸಕ | 28,100–50,100 | ವೈದ್ಯರು ದರ್ಜೆ–2 | 26,000–47,700 |
| 2 | ಉಪಶಸ್ತ್ರ ಚಿಕಿತ್ಸಕ/ಹಿರಿಯ ತಜ್ಞ | 30,400–51,300 | ವೈದ್ಯರು ದರ್ಜೆ–1 | 28,100–50,100 |
| 3 | ಉಪಮುಖ್ಯ ವೈದ್ಯಾಧಿಕಾರಿ/ಉಪನಿರ್ದೇಶಕ/ ಜಿಲ್ಲಾ ಶಸ್ತ್ರ ಚಿಕಿತ್ಸಕ | 36,300–53,850 | ಉಪನಿರ್ದೇಶಕ | 36300–53,850 |

ಸರ್ಕಾರದ ಆದೇಶ ಸಂಖ್ಯೆ:–ಆಕುಕ 222 ಎಂಎಸ್‌ಎಸ್ 90, ದಿನಾಂಕ 19–07–1991ರನ್ವಯ ಅಲೋಪತಿ ವೈದ್ಯರುಗಳಿಗೆ, 6 ವರ್ಷ ಮತ್ತು 13 ವರ್ಷಗಳ ಸೇವೆಗೆ ಕ್ರಮವಾಗಿ 1 ಮತ್ತು 2 ನೇ ಕಾಲಬದ್ಧ ಮುಂಬಡ್ತಿ ನೀಡಿದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ ಆಕುಕ 557 ಹೆಚ್‌ಎಸ್‌ಹೆಚ್ 2011, ದಿನಾಂಕ 03–01–2012ರಲ್ಲಿ 20 ವರ್ಷಗಳ ಸತತ ಸೇವೆಗೆ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮವನ್ನು ನೀಡಿ 3ನೇ ಕಾಲಬದ್ಧ ಮುಂಬಡ್ತಿಯನ್ನು ನೀಡಿದೆ. ಸದರಿ ಆದೇಶಗಳನ್ವಯ ಆಯುಷ್ ವೈದ್ಯರುಗಳಿಗೂ ಈ ಕೆಳಗಿನಂತೆ ಕಾಲಬದ್ಧ ಮುಂಬಡ್ತಿಯನ್ನು ನೀಡಬೇಕಾಗುತ್ತದೆ.

ಅ) ವೈದ್ಯಾಧಿಕಾರಿಗಳು (ಆಯುಷ್):–ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ 6 ವರ್ಷಗಳ ಒಳಗಿನ ಸೇವೆಯನ್ನು ಹೊಂದಿರುವ ವೈದ್ಯರುಗಳನ್ನು ವೈದ್ಯಾಧಿಕಾರಿಗಳು (ಆಯುಷ್) ಎಂದು ಪರಿಗಣಿಸಿ ಅವರುಗಳು ರೂ. 28,100–50,100 ವೇತನ ಶ್ರೇಣಿಯಲ್ಲಿ ಮುಂದುವರೆಯುವುದು.

ಆ) ಹಿರಿಯ ವೈದ್ಯಾಧಿಕಾರಿಗಳು (ಆಯುಷ್):–ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ (ವೈದ್ಯಾಧಿಕಾರಿಗಳು (ಆಯುಷ್) ಎಂದು ಮರು ಪದನಾಮ ಹೊಂದಿರುವ) ಕಾರ್ಯನಿರ್ವಹಿಸುತ್ತಿರುವ, 6 ವರ್ಷಗಳ ಸೇವೆಯನ್ನು ಪೂರೈಸಿರುವ ವೈದ್ಯರುಗಳನ್ನು ಹಿರಿಯ ವೈದ್ಯಾಧಿಕಾರಿಗಳು (ಆಯುಷ್) ಎಂದು ಪರಿಗಣಿಸಿ ಅವರುಗಳು ರೂ. 30,400–51,300 ವೇತನ ಶ್ರೇಣಿಯಲ್ಲಿ ಮುಂದುವರೆಯುವುದು.

ಇ) ಉಪ ನಿರ್ದೇಶಕರು:– ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ (ವೈದ್ಯಾಧಿಕಾರಿಗಳು (ಆಯುಷ್) ಎಂದು ಮರು ಪದನಾಮ ಹೊಂದಿರುವ) ಕಾರ್ಯನಿರ್ವಹಿಸುತ್ತಿರುವ 13 ವರ್ಷಗಳ ಸೇವೆ ಪೂರೈಸಿರುವ ವೈದ್ಯರುಗಳನ್ನು ಉಪ ನಿರ್ದೇಶಕರುಗಳೆಂದು ಪರಿಗಣಿಸಿ ಅವರುಗಳು ರೂ. 36,300–53,850 ವೇತನ ಶ್ರೇಣಿಯಲ್ಲಿ ಮುಂದುವರೆಯುವುದು.

ಈ) ಆಯುಷ್ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ ಉಪ ನಿರ್ದೇಶಕರ ವೇತನ ಪಡೆಯುತ್ತಿರುವ ವೈದ್ಯರುಗಳು, ಉಪ ನಿರ್ದೇಶಕರು (ಆಯ್ಕೆ ಶ್ರೇಣಿ) ಎಂದು ಪರಿಗಣಿಸಿ ರೂ. 38,100–55,200 ವೇತನ ಶೇಣಿಯಲ್ಲಿ ಮುಂದುವರೆಯುವುದು.

ದಿನಾಂಕ:10.01.2013ರಂದು ನಡೆದ ಸಚಿವ ಸಂಪುಟದ ವಿಷಯ ಸಂಖ್ಯೆ:ಸಿ:47/2013ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯರುಗಳಿಗೆ ನೀಡಲಾಗುತ್ತಿರುವ ವೇತನಶ್ರೇಣಿ, ಭತ್ಯೆ, ಸೌಲಭ್ಯಗಳನ್ನು ಆಯುಷ್ ಇಲಾಖೆಯ ವೈದ್ಯರುಗಳಿಗೂ ಸಹ ವಿಸ್ತರಿಸಲು ಅನುಮೋದನೆ ನೀಡಿದೆ. ಆದ್ದರಿಂದ ಈ ಕೆಳಗಿನ ಆದೇಶ;

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 357 ಪಿಐಎಂ 2012, ಬೆಂಗಳೂರು, ದಿನಾಂಕ:24–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಯುಷ್ ಇಲಾಖೆಯ ವೈದ್ಯರು ದರ್ಜೆ–2 ವೃಂದದ ಹುದ್ದೆಯನ್ನು ಗ್ರೂಪ್–ಬಿ ವೃಂದದಿಂದ ಗ್ರೂಪ್–ಎ ವೃಂದಕ್ಕೆ ಮೇಲ್ದರ್ಜೆಗೇರಿಸಿ,ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಲೋಪತಿ ವೈದ್ಯರುಗಳಿಗೆ ಸರಿಸಮಾನವಾದ ವೇತನ ಶ್ರೇಣಿಗಳನ್ನು ಆಯುಷ್ ಇಲಾಖೆಯ ವೈದ್ಯರುಗಳಿಗೆ ಈ ಕೆಳಗಿನಂತೆ ಸರ್ಕಾರವು ನಿಗಧಿ ಪಡಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪ್ರಸ್ತುತ ವೃಂದದ ಹೆಸರು/ವೇತನ ಶ್ರೇಣಿ | ಪರಿಷ್ಕರಿಸಿದ ವೃಂದದ ಹೆಸರು/ವೇತನ ಶ್ರೇಣಿ |
|---|---|---|
| 1 | ವೈದ್ಯರು ದರ್ಜೆ–2,<br>ರೂ.26,000–47,700 | ವೈದ್ಯಾಧಿಕಾರಿ(ಆಯುಷ್)<br>ರೂ. 28,100–50,100 |
| 2 | ವೈದ್ಯರು ದರ್ಜೆ–1,<br>ರೂ.28,100–50,100 | ಹಿರಿಯ ವೈದ್ಯಾಧಿಕಾರಿ(ಆಯುಷ್)<br>ರೂ. 30,400–51,300 |
| 3 | ಉಪನಿರ್ದೇಶಕರು<br>ರೂ. 36,300–53,850 | ಉಪನಿರ್ದೇಶಕರು<br>ರೂ. 36,300–53,850 |

ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡಲಾಗುತ್ತಿರುವ 6, 13 ಮತ್ತು 20 ವರ್ಷಗಳ ಕಾಲಬದ್ಧ ಮುಂಬಡ್ತಿ ವೇತನಗಳನ್ನು ಆಯುಷ್ ವೈದ್ಯರುಗಳಿಗೂ ವಿಸ್ತರಿಸಿ ಈ ಕೆಳಗಿನಂತೆ ನಿಗಧಿಪಡಿಸಿದೆ.

ಅ) ವೈದ್ಯಾಧಿಕಾರಿಗಳು (ಆಯುಷ್):–ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ 6 ವರ್ಷಗಳ ಒಳಗಿನ ಸೇವೆಯನ್ನು ಪೂರ್ಣಗೊಳಿಸಿರುವ ವೈದ್ಯರುಗಳನ್ನು ವೈದ್ಯಾಧಿಕಾರಿಗಳು (ಆಯುಷ್) ಎಂದು ಪರಿಗಣಿಸಿ ಅವರುಗಳು ರೂ. 28,100–50,100 ವೇತನ ಶ್ರೇಣಿಯಲ್ಲಿ ಮುಂದುವರೆಸಿದೆ.

ಆ) ಹಿರಿಯ ವೈದ್ಯಾಧಿಕಾರಿಗಳು (ಆಯುಷ್):–ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ (ವೈದ್ಯಾಧಿಕಾರಿಗಳು (ಆಯುಷ್) ಎಂದು ಮರು ಪದನಾಮ ಹೊಂದಿರುವ) ಕಾರ್ಯನಿರ್ವಹಿಸುತ್ತಿರುವ, 6 ವರ್ಷಗಳ ಸೇವೆಯನ್ನು ಪೂರೈಸಿರುವ ವೈದ್ಯರುಗಳನ್ನು ಹಿರಿಯ ವೈದ್ಯಾಧಿಕಾರಿಗಳು (ಆಯುಷ್) ಎಂದು ಪರಿಗಣಿಸಿ ಅವರುಗಳು ರೂ. 30,400–51,300 ವೇತನ ಶ್ರೇಣಿಯಲ್ಲಿ ಮುಂದುವರೆಸಿದೆ.

ಇ) ಉಪ ನಿರ್ದೇಶಕರು ಪ್ರಸ್ತುತ ವೈದ್ಯರು ದರ್ಜೆ–2 ವೃಂದದಲ್ಲಿ (ವೈದ್ಯಾಧಿಕಾರಿಗಳು (ಆಯುಷ್) ಎಂದು ಮರು ಪದನಾಮ ಹೊಂದಿರುವ) ಕಾರ್ಯನಿರ್ವಹಿಸುತ್ತಿರುವ 13 ವರ್ಷಗಳ ಸೇವೆ ಪೂರೈಸಿರುವ ವೈದ್ಯರುಗಳನ್ನು ಉಪ ನಿರ್ದೇಶಕರುಗಳೆಂದು ಪರಿಗಣಿಸಿ ಅವರುಗಳು ರೂ. 36,300–53,850 ವೇತನ ಶ್ರೇಣಿಯಲ್ಲಿ ಮುಂದುವರೆಸಿದೆ.

ಈ) ಆಯುಷ್ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ ಉಪ ನಿರ್ದೇಶಕರ ವೇತನ ಪಡೆಯುತ್ತಿರುವ ವೈದ್ಯರುಗಳು, ಉಪ ನಿರ್ದೇಶಕರು (ಆಯ್ಕೆ ಶ್ರೇಣಿ) ಎಂದು ಪರಿಗಣಿಸಿ ರೂ. 38,100–55,200 ವೇತನ ಶ್ರೇಣಿಯಲ್ಲಿ ಮುಂದುವರೆಸಿದೆ.

ಆಯುಷ್ ವೈದ್ಯರುಗಳಿಗೆ ಮಾಹೆಯಾನ ರೂ:7,000/– ಗ್ರಾಮೀಣ ಭತ್ಯೆಯನ್ನು ಮತ್ತು ಸ್ನಾತಕೋತ್ತರ ಪದವಿ ಪಡೆದವರಿಗೆ ಮಾಹೆಯಾನ ರೂ:8,000/– ಸ್ನಾತಕೋತ್ತರ ಭತ್ಯೆಯನ್ನು ನಿಗದಿಪಡಿಸಿದೆ. ಇವುಗಳ ಪೈಕಿ ಯಾವುದಾದರೂ ಒಂದು ಭತ್ಯೆಯನ್ನು ಪಡೆಯಲು ಈ ವೈದ್ಯರುಗಳು ಅರ್ಹರಿರುತ್ತಾರೆ.

ಸದರಿ ವೇತನ ಮತ್ತು ಭತ್ಯೆಗಳಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಇಲಾಖೆಗೆ ಒದಗಿಸಿರುವ ಆಯವ್ಯಯದ ಅನುದಾನದಿಂದಲೇ ಭರಿಸತಕ್ಕದ್ದು;

ಸದರಿ ಸೌಲಭ್ಯವು ದಿನಾಂಕ:10.01.2013ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸಚಿವ ಸಂಪುಟದ ವಿಷಯ ಸಂಖ್ಯೆ:ಸಿ47/2013 ದಿನಾಂಕ:10.01.2013ರಲ್ಲಿ ಪಡೆದ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ(ಭಾರತೀಯ ವೈದ್ಯ ಪದ್ಧತಿ)

**PR.295**

## ಅರಣ್ಯ , ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಸಹಾಯಕ ತೋಟಗಾರಿಕಾ ಅಧಿಕಾರಿ ಹಾಗೂ ಕಿರಿಯ ಅಭಿಯಂತರರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪತ್ರ ಸಂಖ್ಯೆ:ಮಾನಿಮ/ಅಡಎ/2012/128, ದಿನಾಂಕ:12–06–2012.

2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪತ್ರ ಸಂಖ್ಯೆ: ಮಾನಿಮ 15 ಅಡಎ 08/557, ದಿನಾಂಕ:24–09–2012

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಕೋರಿರುವಂತೆ ದಿನಾಂಕ:17–07–2012ರಂದು ನಡೆದ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ 184ನೇ ಸಭೆಯಲ್ಲಿ ತೀರ್ಮಾನಿಸಿದಂತೆ, ಮಂಡಳಿಯ ಇಕೋ–ಪಾರ್ಕ್‌ನಲ್ಲಿ ತ್ಯಾಜ್ಯ ನೀರಿನಿಂದ ಉದ್ಯಾನ ನಿರ್ವಹಿಸುತ್ತಿರುವುದರ ಬಗ್ಗೆ ವೈಜ್ಞಾನಿಕ ವಿಷಯ ಸಂಗ್ರಹಣೆ ಅವಶ್ಯವಾಗಿರುತ್ತದೆ. ಅಲ್ಲದೆ ಕಾರ್ಖಾನೆಗಳಿಗೂ ಸಹ ತ್ಯಾಜ್ಯ ನೀರಿನಿಂದ ಅವರ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ಗಿಡ ಮರಗಳನ್ನು ಬೆಳೆಸಲು ಮಂಡಳಿಯಿಂದ ಪ್ರೋತ್ಸಾಹಿಸಲಾಗುತ್ತಿದೆ. ಈ ವಿಷಯದ ಬಗ್ಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಲು ಮಂಡಳಿಗೆ ಒಂದು ಸಹಾಯಕ ತೋಟಗಾರಿಕಾ ಅಧಿಕಾರಿ ಹುದ್ದೆಯ ಅವಶ್ಯಕತೆ ಇರುವುದರಿಂದ ಹಾಗೂ ಪ್ರಸ್ತುತ ಸಹಾಯಕ ಕಾರ್ಯಪಾಲಕ ಅಭಿಯಂತರರು ಮಂಡಳಿಯ ಕೇಂದ್ರ ಕಛೇರಿ ಹಾಗೂ ಪ್ರಾದೇಶಿಕ ಕಛೇರಿಗಳ ಕಟ್ಟಡಗಳ ಸುಪರ್ದಿಯನ್ನು ನೋಡಿಕೊಳ್ಳುತ್ತಿದ್ದು, ಸದರಿ ಅಧಿಕಾರಿಗಳನ್ನು ನಿಯೋಜನೆ ಮೇಲೆ ಪಡೆಯಲಾಗಿದ್ದು, ಸದರಿ ಅಧಿಕಾರಿಗಳಿಗೆ ಪೂರಕ ಕೆಲಸಗಳನ್ನು ನಿರ್ವಹಿಸಲು ಓರ್ವ ಕಿರಿಯ ಅಭಿಯಂತರರು ಅವಶ್ಯಕತೆಯಿರುವುದರಿಂದ ಒಂದು ಸಹಾಯಕ ತೋಟಗಾರಿಕಾ ಅಧಿಕಾರಿ ಮತ್ತು ಒಂದು ಕಿರಿಯ ಅಭಿಯಂತರರ ಹುದ್ದೆಗಳನ್ನು ಸೃಜನೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 103 ಇಪಿಸಿ 2012, ಬೆಂಗಳೂರು, ದಿನಾಂಕ:27–11–2012**

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಬಿ.ಎಸ್ಸಿ (ತೋಟಗಾರಿಕಾ/ಕೃಷಿ) ವಿದ್ಯಾರ್ಹತೆಯ ಒಂದು ಸಹಾಯಕ ತೋಟಗಾರಿಕಾ ಅಧಿಕಾರಿ ಹಾಗೂ ಸಿವಿಲ್ ಡಿಪ್ಲೋಮಾ ಪಡೆದ ಒಂದು ಕಿರಿಯ ಅಭಿಯಂತರರ ಹುದ್ದೆಯನ್ನು ಸೃಜಿಸಲು ಸರ್ಕಾರದ ಆದೇಶ ಸಂಖ್ಯೆ:ಅಪಜೀ 7 ಇಪಿಸಿ 2010, ದಿನಾಂಕ:30–09–2010ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

ಸದರಿ ಹುದ್ದೆಗಳಿಂದ ಉಂಟಾಗುವ ವೃಂದ ಬಲವನ್ನು ಸರಿಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ಮಂಡಳಿಯು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ನಿಯಮಾನುಸಾರ ತಿದ್ದುಪಡಿ ಆದೇಶವನ್ನು ಹೊರಡಿಸತಕ್ಕದ್ದು.

ಸದರಿ ಹುದ್ದೆಗಳ ಸೃಜನೆಯಿಂದ ಉಂಟಾಗುವ ವೆಚ್ಚವನ್ನು ಮಂಡಳಿಯ ಸ್ವಂತ ಅನುದಾನದಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ಅನುಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**P.R. 260**

## KANNADA, CULTURE AND INFORMATION SECRETARIAT

**Sub :** Development of Kannada Software-notifying Unicode as Standard for Kannada coding-reg.

**Read :**
1) Ministry of Communications and Information Technology, Govt. of India Notification dated ; 27-11-2009
2) Notification No. KCIT 131 Kasani 2008(p), dated : 01-12-2008.
3) Report of Expert Committee dated 15-04-2010
4) Proceedings of the meeting dated 09-04-2012 held under the Chairmanship of the Chief Secretary to Govt.
5) International Institute of Information Technology, Bangalore, Letter No. IIITB/Unicode/2012, dated : 11-04-2012

**Preamble :**

Department of Information Technology, Govt. of India notified Unicode 5.1.0 and its future versions as the Standard for e-Governance applications for promoting the usage of Open Standards to avoid any technology lock-ins vide notification read at (1) above.

On the occasion of Kannada Rajyotsava held on 01-11-2008, Hon'ble Chief Minister has announced that the State Govt. would provide a special grant of Rs. 25.00 Crores for all-round development of Kannada. In view of this, an Expert Committee for the Kannada Software Development has been constituted to consider the subject matter in depth under the Chairmanship of Sri K. Chidananda Gowda, retired Vice Chancellor vide notification read at (2) above.

The Expert Committee after detailed deliberations submitted the final report to Govt. read at (3) above and has made the following recommendations in connection with Kannada Software :-

- Kannada Software based on ASCII
- Kannada Software based on Unicode
- Kannada Software based on Linux
- Kannada Software based on Mobile Phone
- Kannada virtual University
- Kannada Wikipedia (Kannada Encyclopedia in internet)
- Kannada desktop publication
- Software related to e-Commerce, e-Mail, e-Governance
- Kannada Braille Software
- Converters
- O.C.R. (Akshara Jana)
- Kannada Speach processing
- Kannada Learning software
- Standardisation
- Dictionaries in internet
- Kannada technical glossary
- Multimedia applications
- Publication of best Kannada literary works
- Developing software which is essential for public domain by identifying it
- Kannada Tech / Latex software
- Kannada Software Development Fund

In the meeting held on 09-04-2012 under the Chairmanship of the Chief Secretary to Govt. it was resolved to obtain a technical report from International Institute of Information Technology, Bangalore regarding usage of Unicode and after considering the report to place the matter before the Cabinet for approval.

The IIITB has submitted its report to Govt. read at (5) above stating that, Unicode is a computing industry standard for the consistent encoding representation and handling of text expressed in most of the world's writing systems. Unicode is an evolving International effort at standardizing (1 to 4 bytes per character). Unicode provides neat separation between encoding scripts and rendering. Fonts (a collection of Glyphs, dingbats) render Unicode characters appropriately on many devices. Due to lack of extensive participation from Indian scholars, Unicode code assignment to various special characters required for Indic scripts has suffered. Unicode preserves correct "representation" and can be rendered across hardware (Phone, PC, Projector, Video) and used in many software (OS, DBMS), Indirectly provides "sort" order – though artificial for Indian scripts once correctly done, everyone benefits. Font development can happen independently and all fronts can benefit.

IIITB has further stated about the limitations of Non Unicode encoding schemes Viz, (1) Encoding & rendering are tightly coupled (2) Cannot render consistently across platforms (3) Files and Documents cannot be shared easily.

IIITB has recommended notify the Unicode as the encoding standard for Kannada, stating that all earlier content need to be converted. Converters can take care of the earlier key encoding systems used in software like Nudi and Baraha so that all current content can be converted and preserved. Future content creation can benefit from consistency across platforms.

After careful consideration of the proposal, the following order is issued.

**GOVERNMENT ORDER NO. KCIT 79 KASANI 2010, BANGALROE, DATED 24TH NOVEMBER 2012**

In the circumstances explained in the preamble, The Government of Karnataka hereby notifies Unicode 6.0.0 and its future versions as the Standard for Kannada for e-Governance applications, data base correspondences, Internet, Mobile, Laptop, Tablet applications, applications for KIOSK, ATM etc.. of all levels of information technology with immediate effect.

The Government Departments shall take immediate steps to migrate all digital documents in legacy encodings to Unicode and shall also take steps to provide conversion tools for formats such as plain text, rich text, desktop office applications and other formats as necessary in all popular Operating Systems.

This order issued with the concurrence of DPAR (E-Govenance) vide U.O. Note No. ಸಿಆಸುಇ 11 ಇಆಇ 2012 dated 21-07-2012 and Finance Dept. Vide U.O. Note No. FD 732 EXP-7/2012, dated: 15-09-2012.

By Order and in the name of the Governor of Karnataka,
**G. B. HEMANNA,**
Under Secretary to Government,
Kannada, Culture and Information Dept. (Adalita Kannada)

**P.R. 53**

## ಆರ್ಥಿಕ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ : ಆಇ 11 ಸೇನಿಸೇ 2012, ಬೆಂಗಳೂರು, ದಿನಾಂಕ : 4ನೇ ಡಿಸೆಂಬರ್, 2012**

ಸರ್ಕಾರಿ ಆದೇಶ ಸಂಖ್ಯೆ : ಆಇ 3 ಸೇನಿಸೇ 2012 ದಿನಾಂಕ : 14–06–2012ರ ಕಂಡಿಕೆ 15ರಲ್ಲಿನ ರಜಾ ಪ್ರಯಾಣ ರಿಯಾಯಿತಿಗೆ ಸಂಬಂಧಿಸಿದ ಕಂಡಿಕೆ 15.1ರ ನಂತರ ಈ ಕೆಳಗಿನ ಕಂಡಿಕೆಯನ್ನು ಸೇರಿಸಲ್ಪಟ್ಟಿದೆ ಎಂದು ಭಾವಿಸತಕ್ಕದ್ದು :–

"ಪರಂತು ದಿನಾಂಕ : 01–04–2012ರ ಪೂರ್ವದಲ್ಲಿದ್ದಂತಹ ಅವಕಾಶಗಳ ರೀತ್ಯದ ಸಂಪೂರ್ಣ ಸೇವಾವಧಿಯಲ್ಲಿನ ಒಂದು ಬಾರಿಯ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಈವರೆಗಿನ ಸೇವಾವಧಿಯಲ್ಲಿ ಉಪಯೋಗಿಸಿಕೊಂಡಿರುವ ನೌಕರನು, ಈ ನಿಯಮಗಳ ಮೇರೆಗಿನ ಎರಡನೆಯ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಉಳಿದ ಸೇವಾವಧಿಯಲ್ಲಿ ಪಡೆಯಲು ಅರ್ಹನಾಗತಕ್ಕದ್ದು. ಹಾಗೂ ಈವರೆಗಿನ ಸೇವಾವಧಿಯಲ್ಲಿ ಒಂದು ಬಾರಿಯ ಈ ಸೌಲಭ್ಯವನ್ನು ಉಪಯೋಗಿಸಿಕೊಳ್ಳದಿರುವಂತಹ ನೌಕರನು, ಈ ಸೌಲಭ್ಯವನ್ನು ಆತನ ಉಳಿದ ಸೇವಾವಧಿಯಲ್ಲಿ ಎರಡು ಬಾರಿ ಪಡೆದುಕೊಳ್ಳುವಲ್ಲಿ ಅರ್ಹನಾಗತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1)

**P.R. 124**

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರಿ ನೌಕರರಿಗೆ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯ ಮಂಜೂರಾತಿ–ನಿಯಮದ ಸಡಿಲಿಕೆ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(7) ರಡಿಯ ಟಿಪ್ಪಣಿ (1)ರ ಪ್ರಕಾರ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯದಲ್ಲಿ ವಾಯುಯಾನ ಅಥವಾ ಪ್ರಥಮ ದರ್ಜೆ ಹವಾ ನಿಯಂತ್ರಿತ ರೈಲು ಪ್ರಯಾಣಗಳು, ಯಾವುದೇ ವರ್ಗದ ಸರ್ಕಾರಿ ನೌಕರರಿಗೆ ಪ್ರಯಾಣದ ವಿಧಾನದಲ್ಲಿ (mode of journey) ರಿಯಾಯಿತಿಗೆ ಅರ್ಹವೆನಿಸುವುದಿಲ್ಲ. ರಜಾ ಪ್ರಯಾಣ ರಿಯಾಯಿತಿ ಸೌಲಭ್ಯದಡಿಯಲ್ಲಿ ಅವರಿಗೆ ಅರ್ಹವಿರುವ ಪ್ರಯಾಣ ದರ್ಜೆಯ ಅರ್ಹತೆಗೆ ಸೀಮಿತಗೊಳಿಸಿ, ವಿಮಾನದಲ್ಲಿ ಪ್ರಯಾಣಿಸಲು, ನಿಯಮಗಳ ಸಡಿಲಿಕೆಗೆ ಕೋರಿ ಅನೇಕ ಪ್ರಸ್ತಾವನೆಗಳು ಅಧಿಕಾರಿ/ನೌಕರರ ವರ್ಗದವರಿಂದ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ವೀಕೃತವಾಗುತ್ತಿವೆ. ಈ ಹಿನ್ನೆಲೆಯಲ್ಲಿ ಸರ್ಕಾರವು ವಿಷಯವನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 10 ಸೇನಿಸೇ 2012, ಬೆಂಗಳೂರು ದಿನಾಂಕ: 27ನೇ ನವೆಂಬರ್, 2012**

ಸರ್ಕಾರಿ ನೌಕರರು ರಜಾ ಪ್ರಯಾಣ ರಿಯಾಯಿತಿ ಸೌಲಭ್ಯದಡಿಯಲ್ಲಿ, ಅವರಿಗೆ ಅರ್ಹವಿರುವ ಪ್ರಯಾಣ ದರ್ಜೆಯ ಅರ್ಹತೆಗಿಂತ ಹೆಚ್ಚಿನ ಪ್ರಯಾಣ ವಿಧಾನದಲ್ಲಿ ಪ್ರಯಾಣ ಮಾಡಲು ಇಚ್ಛಿಸಿ ಕೋರಿಕೆಯನ್ನು ಸಲ್ಲಿಸಿದಲ್ಲಿ, ಅಂತಹ ಪ್ರಕರಣಗಳಲ್ಲಿ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(7) ರನುಸಾರ ವಾಸ್ತವವಾಗಿ ಅರ್ಹವಾಗುವ ಪ್ರಯಾಣ ದರ್ಜೆಯ ಅರ್ಹತೆಯನುಸಾರ ಅರ್ಹವಾಗಬಹುದಾದ ಪ್ರಯಾಣ ದರಕ್ಕೆ ಕ್ಲೇಮನ್ನು ಸೀಮಿತಗೊಳಿಸುವ ಷರತ್ತಿಗೊಳಪಡಿಸಿ, ಸಕ್ಷಮ ನಿಯಂತ್ರಣ ಅಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ

ನಿಯಮ 550(12)(ಎ) ರನ್ವಯದ ನಿರ್ದಿಷ್ಟ ಮಂಜೂರಾತಿಯನ್ನು ಪರಿಗಣಿಸುವಲ್ಲಿ, ನಿಯಮ 550(7) ರಡಿಯಲ್ಲಿನ ಟಿಪ್ಪಣಿ (1) ನಿರ್ಬಂಧವನ್ನು ಸಡಿಲಿಸಿ ಸರ್ಕಾರವು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1)

P.R. 125

## ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಅಕ್ರಮ ಗಣಿಗಾರಿಕೆ ಕುರಿತು ಸಲ್ಲಿಸಿದ್ದ ಮಾನ್ಯ ಕರ್ನಾಟಕ ಲೋಕಾಯುಕ್ತರ, ತನಿಖಾ ವರದಿಯನ್ವಯ ಬೆಲಿಕೇರಿ ಬಂದರಿನಲ್ಲಿ ಕಬ್ಬಿಣದ ಅದಿರನ್ನು ಅಕ್ರಮವಾಗಿ ಸಾಗಿಸಿರುವ ಸಂಬಂಧದಲ್ಲಿ ಶ್ರೀ ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ

**ಓದಲಾಗಿದೆ :** ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಕಡತ ಸಂಖ್ಯೆ : ಲೋಇ 172 ಪಿಎಸ್‌ಪಿ 2011.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಇವರು ಮೇಲೆ ಓದಲಾದ ಇಲಾಖೆಯ ಕಡತವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಉಲ್ಲೇಖಿಸಿ ಮಾನ್ಯ ಲೋಕಾಯುಕ್ತರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ : 27–07–2011ರ ವರದಿಯಲ್ಲಿ ತಿಳಿಸಿರುವಂತೆ ಬೆಲಿಕೇರಿ ಬಂದರಿನಲ್ಲಿ ಕಬ್ಬಿಣದ ಅದಿರಿನ ಅಕ್ರಮ ಸಾಗಾಣಿಕೆಯಲ್ಲಿ ಭಾಗಿಯಾಗಿ ಅವ್ಯವಹಾರಗಳನ್ನು ನಡೆಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನು ಉಂಟು ಮಾಡಿರುವ ಶ್ರೀ ಕ್ಯಾಪ್ಟನ್ ಆರ್. ಮೋಹನ್ ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಹಾಗೂ ಇಲಾಖೆಯ ಇತರೆ ಕೆಲವು ಅಧಿಕಾರಿ/ನೌಕರರ ವಿರುದ್ಧದ ದುರ್ನಡತೆಗಾಗಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಕೋರಿ ದೋಷಾರೋಪಣೆಗಳನ್ನು ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಇಮುವಿ 2011, ಬೆಂಗಳೂರು, ದಿನಾಂಕ: 19ನೇ ಜನವರಿ, 2013**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿದ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಆರೋಪಿತ ಗ್ರೂಪ್–ಎ ಮತ್ತು ಬಿ ಅಧಿಕಾರಿಗಳ ಹಾಗೂ ಗ್ರೂಪ್–ಸಿ ಮತ್ತು ಡಿ ವೃಂದದ ನೌಕರರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಒಂದೇ ವ್ಯವಹರಣೆಯಲ್ಲಿ ಶಿಸ್ತು ಕ್ರಮವನ್ನು ಜರುಗಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

**ಗ್ರೂಪ್–ಎ ಮತ್ತು ಬಿ ವೃಂದದ ಅಧಿಕಾರಿಗಳು**

| ಕ್ರ.ಸಂ. | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ |
|---|---|
| 1 | ಕ್ಯಾಪ್ಟನ್ ಆರ್. ಮೋಹನ್,<br>ನಿರ್ದೇಶಕರು, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ |
| 2 | ಕ್ಯಾಪ್ಟನ್ ಸಿ. ಸ್ವಾಮಿ<br>ಬಂದರು ಅಧಿಕಾರಿ (ಅಮಾನತ್ತು) |
| 3 | ಶ್ರಿ ಟಿ. ಆರ್. ಕೃಷ್ಣಮೂರ್ತಿ<br>ಉಪ ಮುಖ್ಯ ಇಂಜಿನಿಯರ್ |
| 4 | ಶ್ರೀ ಟಿ. ಎಸ್. ರಾಠೋಡ್<br>ಕಾರ್ಯಪಾಲಕ ಅಭಿಯಂತರರು |
| 5 | ಶ್ರೀ ಯಜ್ಞಕುಮಾರ್<br>ಜಲ ಮೋಜಣಿದಾರರು |

**ಗ್ರೂಪ್–ಸಿ ವೃಂದದ ನೌಕರರು**

| | |
|---|---|
| 6 | ಶ್ರೀ ಮಹೇಶ್ ಜಿ. ಬಿಲಿಯೇ<br>ಉಪ ಬಂದರು ಸಂರಕ್ಷಣಾಧಿಕಾರಿ |
| 7 | ಶ್ರೀ ಟಿ. ಆರ್. ನಾಯ್ಕ<br>ಬಂದರು ಸಂರಕ್ಷಣಾಧಿಕಾರಿ |

| | |
|---|---|
| 8 | ಶ್ರೀ ಸುರೇಶ್ ಶೆಟ್ಟಿ<br>ಬಂದರು ಸಂರಕ್ಷಣಾಧಿಕಾರಿ |
| 9 | ಶ್ರೀ ಯೋಗಿಶ್ ವೈ ಶೆಟ್ಟಿ<br>ಸಹಾಯಕ ಬಂದರು ಸಂರಕ್ಷಣಾಧಿಕಾರಿ |
| 10 | ಶ್ರೀ ಡಿ. ಡಿ. ಪರುಳೀಕರ<br>ಉಪ ಬಂದರು ಸಂರಕ್ಷಣಾಧಿಕಾರಿ |
| 11 | ಶ್ರೀ ಗೌಸ ಆಲಿ<br>ಸಹಾಯಕ ಬಂದರು ಸಂರಕ್ಷಣಾಧಿಕಾರಿ |
| 12 | ಶ್ರೀ ಸಾಯಿನಾಥ್ ಥಾಮಸ್<br>ಸಹಾಯಕ ಬಂದರು ಸಂರಕ್ಷಣಾಧಿಕಾರಿ |

**ಗ್ರೂಪ್–ಡಿ ವೃಂದದ ನೌಕರರು**

| | |
|---|---|
| 13 | ಶ್ರೀ ಯು. ರಾಮಚಂದ್ರನಾಯಕ್<br>ಸಹಾಯಕ ದೀಪಪಾಲಕ |
| 14 | ಶ್ರೀ ಎಂ. ಯು. ಆಚಾರಿ, ಲಾಸ್ಕರ |
| 15 | ಶ್ರೀ ಎನ್. ಎಂ. ಗಾಂವಕರ, ಲಾಸ್ಕರ |
| 16 | ಶ್ರೀ ಸಂತೋಷ್ ಡಿ. ಮೇಹತಾ, ಲಾಸ್ಕರ |
| 17 | ಶ್ರೀ ಎಂ. ಆರ್. ಹರಿಕಂತ್ರ, ನಾವಿಕ |
| 18 | ಶ್ರೀ ಜೆ. ಅವರಸೇಕರ, ನಾವಿಕ |
| 19 | ಶ್ರೀ ರಾಜು ಕೆ. ಕುಂದರ, ಲಾಸ್ಕರ |
| 20 | ಶ್ರೀ ಆರ್. ಎಂ. ನಾಯ್ಕ, ಲಾಸ್ಕರ |
| 21 | ಶ್ರೀ ಕೆ. ವಿ. ನಾಯ್ಕ, ಲಾಸ್ಕರ |
| 22 | ಶ್ರೀ ಪಿ. ಎಸ್. ನಾಯ್ಕ, ಲಾಸ್ಕರ |
| 23 | ಶ್ರೀ ಗಣು ಎನ್. ಆಗೇರ, ಲಾಸ್ಕರ |
| 24 | ಶ್ರೀ ಸಾಯಿನಾಥ ಕೇರ್‌ಕರ, ಸಾರಂಗ–3 |
| 25 | ಶ್ರೀ ಮಹೇಶ್ ಎಲ್ ಹರಿಕಂತ್ರ, ಸಾರಂಗ–3 |

ಅಲ್ಲದೇ ಒಂದೇ ವ್ಯವಹರಣೆಗಳ ಉದ್ದೇಶಕ್ಕಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಅವರು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು, ಶ್ರೀ ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರನ್ನುಳಿದು ಇತರೆ ಆರೋಪಿಗಳ ವಿರುದ್ಧ ಅವರ ಸಕ್ಷಮ ಪ್ರಾಧಿಕಾರದ ಅನುಮೋದನೆಯೊಡನೆ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರುತ್ತಾರೆ. ಶ್ರೀ ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು, ಇವರಿಗೆ ದಂಡನೆಯನ್ನು ವಿಧಿಸಲು ಉದ್ದೇಶಿಸಿದಲ್ಲಿ ವಿಚಾರಣಾ ವರದಿಯನ್ನು ದಾಖಲೆಗಳೊಡನೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸತಕ್ಕದ್ದು, ಈ ವ್ಯವಹರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11ಎರಲ್ಲಿ ನಿಗಧಿಪಡಿಸಿರುವ ಕಾರ್ಯ ವಿಧಾನಗಳನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಕೆ. ಲಕ್ಷ್ಮೀನಾರಾಯಣರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಇಲಾಖೆ (ಸೇವೆಗಳು–3)

**P.R. 127**

## ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ತಾಲ್ಲೂಕು, ಹೊಳಲೂರು ಹೋಬಳಿ, ಬೆಳಲಕಟ್ಟೆ ಗ್ರಾಮದ ಸ.ನಂ. 151 ರಲ್ಲಿ 200.00 ಎಕರೆ ಗೋಮಾಳ ಭೂಮಿಯನ್ನು ಸಿ.ಆರ್.ಪಿ.ಎಫ್. ಬೆಟಾಲಿಯನ್ ವಿಸ್ತರಿಸಲು ಮಂಜೂರು ಮಾಡುವ ಬಗ್ಗೆ

**ಉಲ್ಲೇಖ :**
1. ಐ.ಜಿ.ಪಿ.ಕೆ & ಕೆ., ಸಿ.ಆರ್.ಪಿ.ಎಫ್., ಜಿ.ಸಿ. ಬೆಂಗಳೂರು ಇವರ ಪತ್ರ ಸಂಖ್ಯೆ : ಬಿ.ವಿ.–1/2012–13 ಜಿಸಿ–ಬಿಎಲ್‌ಡಿಜಿ (ಲ್ಯಾಂಡ್) ದಿನಾಂಕ : 14–05–2012.
2. ಜಿಲ್ಲಾಧಿಕಾರಿ, ಶಿವಮೊಗ್ಗರವರ ಪತ್ರ ಸಂಖ್ಯೆ : ಎಲ್.ಎನ್.ಡಿ.(1)ಸಿ.ಆರ್.422/2010–11 ದಿನಾಂಕ : 19–07–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಐ.ಜಿ.ಪಿ.ಕೆ., & ಕೆ., ಸಿ.ಆರ್.ಪಿ.ಎಫ್., ಬೆಟಾಲಿಯನ್ ಇವರ ದಿನಾಂಕ : 14–05–2012ರ ಪತ್ರದಲ್ಲಿ ಈ ಬೆಟಾಲಿಯನ್‌ನಲ್ಲಿ ಸುಮಾರು 1200 ವಿವಿಧ ವೃಂದ ಅಧಿಕಾರಿಗಳಿದ್ದು, ಇವರುಗಳನ್ನು ನೇಮಿಸುವ ಮೊದಲು ಅಗತ್ಯವಿದ್ದರೆ ಕಾನೂನು ಮತ್ತು ಸುವ್ಯವಸ್ಥೆ ನಿರ್ವಹಣೆ ಮಾಡಲು ತರಬೇತಿ ನೀಡಲಾಗುತ್ತದೆ. ಶಿವಮೊಗ್ಗವು ಮಲೆನಾಡು ಪ್ರದೇಶದ ಮಧ್ಯಭಾಗದಲ್ಲಿರುವುದರಿಂದ ಸಿ.ಆರ್.ಪಿ.ಎಫ್. ಬೆಟಾಲಿಯನ್ ಸ್ಥಾಪಿಸಿದಲ್ಲಿ ಮಲೆನಾಡು ಪ್ರದೇಶದಲ್ಲಿನ ನಕ್ಸಲ್ ಚಟುವಟಿಕೆಗಳನ್ನು ತಡೆಯಲು ಅನುಕೂಲವಾಗುವುದು. ಆದ್ದರಿಂದ ಶಿವಮೊಗ್ಗ ಸಮೀಪದಲ್ಲಿ ಸಿ.ಆರ್.ಪಿ.ಎಫ್. ಬೆಟಾಲಿಯನ್ ಸ್ಥಾಪಿಸಲು 150–200 ಎಕರೆ ಸರ್ಕಾರಿ ಭೂಮಿಯನ್ನು ಉಚಿತವಾಗಿ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಜಿಲ್ಲಾಧಿಕಾರಿ, ಶಿವಮೊಗ್ಗ ಇವರ ದಿನಾಂಕ : 19–07–2012ರ ಪತ್ರದಲ್ಲಿ ಶಿವಮೊಗ್ಗ ತಾಲ್ಲೂಕು, ಹೊಳಲೂರು ಹೋಬಳಿ ಬೆಳಲಕಟ್ಟೆ ಗ್ರಾಮದ ಸ.ನಂ. 151ರಲ್ಲಿ ಒಟ್ಟು 425.23 ಎಕರೆ ಗೋಮಾಳ ಜಮೀನು ಇರುತ್ತದೆ. ಪ್ರಸ್ತಾಪಿತ ಜಮೀನು ಶಿವಮೊಗ್ಗ ನಗರದಿಂದ ಸುಮಾರು 10 ಕಿ.ಮೀ. ದೂರವಿರುತ್ತದೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಖುಷ್ಕಿ ಜಮೀನಿಗೆ ರೂ. 91,000–00 ಮಳೆ ತರಿಗೆ ರೂ. 1,10,500–00 ಇರುತ್ತದೆ. ಈ ಜಮೀನಿನಲ್ಲಿ ಕೆಲವರು ಅನಧಿಕೃತ ಸಾಗುವಳಿ ಮಾಡುತ್ತಿದ್ದು, ನಮೂನೆ 50, 53ರಲ್ಲಿ ಸಕ್ರಮಾತಿ ಕೋರಿರುವ ಅರ್ಜಿಗಳು ಬಾಕಿ ಇರುತ್ತವೆ. ಆದಾಗ್ಯೂ ಅಕ್ರಮ ಸಕ್ರಮ ಸಮಿತಿಯು ಈ ಅರ್ಜಿಗಳನ್ನು ತಿರಸ್ಕರಿಸಿದೆ. ಈಗಿದ್ದಾಗ್ಯೂ 70 ಜನಗಳು ಸುಮಾರು 152 ಎಕರೆ ಜಮೀನನ್ನು ಅನಧಿಕೃತ ಸಾಗುವಳಿ ಮಾಡುತ್ತಿದ್ದು, ಉಳಿದ ಜಮೀನು ಪೊದೆಯಿಂದ ಆವೃತ್ತವಾಗಿರುತ್ತದೆ. ಈ ಹಿಂದೆ ಸೋಗಾನೆ ಗ್ರಾಮದ ಸ.ನಂ. 120 ರಲ್ಲಿ ವಿಮಾನ ನಿಲ್ದಾಣಕ್ಕೆ ಹಾಗೂ ಆಯುಷ್ ಕಾಲೇಜಿಗೆ ಜಮೀನು ನೀಡಿದಾಗ ಅನಧಿಕೃತ ಸಾಗುವಳಿದಾರರನ್ನು ತೆರವುಗೊಳಿಸಲು ಎಕರೆ ಒಂದಕ್ಕೆ ರೂ. 2.00 ಲಕ್ಷ ಪರಿಹಾರಧನ ನೀಡಲಾಗಿತ್ತು. ಇದೇ ಕ್ರಮವನ್ನು ಶಿವಮೊಗ್ಗ ತಾಲ್ಲೂಕು, ಹೊಳಲೂರು ಹೋಬಳಿ, ಬೆಳಲಕಟ್ಟೆ ಗ್ರಾಮ ಇಲ್ಲಿ ಅಕ್ರಮ ಸಾಗುವಳಿ ಮಾಡುತ್ತಿರುವ ರೈತರಿಗೂ ಅನುಸರಿಸಬೇಕಾಗುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ ಕೆಲವು ಭಾಗಗಳನ್ನು ನಕ್ಸಲ್ ಪೀಡಿತ ಪ್ರದೇಶಗಳೆಂದು ಗುರುತಿಸಲಾಗಿದ್ದು, ಸೂಕ್ಷ್ಮ ಪ್ರದೇಶವಾಗಿರುತ್ತದೆ. ಆ ಪ್ರಯುಕ್ತ ಶಿವಮೊಗ್ಗ ತಾಲ್ಲೂಕು, ಹೊಳಲೂರು ಹೋಬಳಿ, ಬೆಳಲಕಟ್ಟೆ ಗ್ರಾಮದ ಸ.ನಂ. 151ರಲ್ಲಿ 200.00 ಎಕರೆ ಜಮೀನನ್ನು ಸಿ.ಆರ್.ಪಿ,ಎಫ್. ಬೆಟಾಲಿಯನ್‌ಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 71 ಎಲ್‌ಜಿಎಸ್ 2012, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್, 2012**

ಶಿವಮೊಗ್ಗ ತಾಲ್ಲೂಕು, ಹೊಳಲೂರು ಹೋಬಳಿ, ಬೆಳಲಕಟ್ಟೆ ಗ್ರಾಮದ ಸ.ನಂ. 151 ರಲ್ಲಿ 200 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966 ನಿಯಮ 97(4)ರನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಮಾರ್ಗಸೂಚಿ ದರದಂತೆ ಎಕರೆ ಒಂದಕ್ಕೆ ರೂ. 2.00 ಲಕ್ಷದಂತೆ ದರವನ್ನು ನಿಗದಿಪಡಿಸಿ, ಸದರಿ ಜಮೀನಿನಲ್ಲಿ ಅನಧಿಕೃತ ಸಾಗುವಳಿ ಮಾಡುತ್ತಿರುವ ಸಾಗುವಳಿದಾರರಿಗೆ ಎಕರೆ ಒಂದಕ್ಕೆ ರೂ. 2.00 ಲಕ್ಷ ಪರಿಹಾರ ಧನವನ್ನು ಸಿ.ಆರ್.ಪಿ.ಎಫ್. ಸಂಸ್ಥೆಯೇ ಭರಿಸುವ ಷರತ್ತಿಗೊಳಪಡಿಸಿ ಸದರಿ ಜಮೀನನ್ನು ಸಿ.ಆರ್.ಪಿ.ಎಫ್. ಬೆಟಾಲಿಯನ್ ಸ್ಥಾಪಿಸಲು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–1)

**P.R. 131**

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ ಮರಳೂರು ಗ್ರಾಮದಲ್ಲಿ ರೇಣುಕಾಚಾರ್ಯ ಮಂದಿರ ನಿರ್ಮಾಣಕ್ಕೆ ಬಾಳೆಹೊನ್ನೂರಿನ ಜಗದ್ಗುರು ರಂಭಾಪುರಿ ಪೀಠಕ್ಕೆ ಜಮೀನು ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**
1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್ 140/2012–13, ದಿನಾಂಕ : 25–09–2012.
2. ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್ ಡಿ (ಟಿಎಂಕೆ)/ಸಿಆರ್.594 2011–02, ದಿನಾಂಕ : 31–08–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರು ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಮರಳೂರು ಗ್ರಾಮದ ಸರ್ವೆ ನಂ. 52ರಲ್ಲಿ 11 ಗುಂಟೆ ವಿಸ್ತೀರ್ಣದ ಜಮೀನನ್ನು ಶ್ರೀ ಶ್ರೀ ಜಗದ್ಗುರು ರಂಭಾಪುರಿ ಪೀಠದ ರೇಣುಕಾಚಾರ್ಯ ಮಂದಿರ ನಿರ್ಮಾಣಕ್ಕೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕ್ರಮ ಸಂಖ್ಯೆ (2)ರಲ್ಲಿನ ಜಿಲ್ಲಾಧಿಕಾರಿ ತುಮಕೂರು ಜಿಲ್ಲೆ ಇವರ ವರದಿಯಂತೆ ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಮರಳೂರು ಗ್ರಾಮದ ಸ.ನಂ. 52ರಲ್ಲಿ 25 ಎಕರೆ 35 ಗುಂಟೆ ಜಮೀನು **"ಆಳಶೆಟ್ಟಿ ಕೆರೆ ಅಂಗಳ"** ಎಂದು ವರ್ಗೀಕೃತವಾಗಿರುತ್ತದೆ. ಇದರಲ್ಲಿ ಈಗಾಗಲೇ 24 ಎಕರೆ 15 ಗುಂಟೆ ವಿಲೆಯಾಗಿದ್ದು. ಈ ಪ್ರದೇಶ ವಿವಿಧ ಅನುಭವದಾರರ ಬಳಕೆಯಲ್ಲಿರುತ್ತದೆ. ಉಳಿದಂತೆ 1 ಎಕರೆ 23 ಗುಂಟೆ ಕೆರೆ ಅಂಗಳವಿದ್ದು. ಇದರಲ್ಲಿ 11 ಗುಂಟೆ ವಿಸ್ತೀರ್ಣದ ಜಮೀನನ್ನು ಶ್ರೀ ಶ್ರೀ ಜಗದ್ಗುರು ರಂಭಾಪುರಿ ಪೀಠದ ರೇಣುಕಾಚಾರ್ಯ ಮಂದಿರ ನಿರ್ಮಾಣಕ್ಕಾಗಿ ಮಂಜೂರು ಮಾಡಲು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ಕೋರಿಕೆ ಸಲ್ಲಿಸಿರುತ್ತಾರೆ.

ಸದರಿ ಜಮೀನಿನ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ 35–00 ಲಕ್ಷ. ಇರುತ್ತದೆ. ಈ ಜಮೀನು ತುಮಕೂರು ನಗರಸಭೆ ವ್ಯಾಪ್ತಿಯಲ್ಲಿದ್ದು. ತುಮಕೂರು–ಕುಣಿಗಲ್ ರಸ್ತೆ ಸುಮಾರು 200–250 ಮೀಟರ್ ಅಂತರದಲ್ಲಿರುತ್ತದೆ. ಸರ್ವೆ ನಂ. 52ರಲ್ಲಿರುವ ಒಟ್ಟು 25 ಎಕರೆ 35 ಗುಂಟೆ ಜಮೀನಿನಲ್ಲಿ 9–33 ಎಕರೆ ಜಮೀನು ಹೇಮಾವತಿ ನಾಲಾ ಕಛೇರಿ. 3–36 ಎಕರೆ ಜಮೀನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ. 1–32 ಎಕರೆ ಜಮೀನು ಕರ್ನಾಟಕ ನಗರ ನೀರು ಸರಬರಾಜು ಒಳಚರಂಡಿ ಮಂಡಳಿ, 2–33 ಎಕರೆ ರಸ್ತೆ ಹಾಗೂ ಇತರೆ ಸಂಘ ಸಂಸ್ಥೆಗಳು ಅನುಭವದಾರರಾಗಿತ್ತಾರೆ.

ಈ ಕಾರಣದಿಂದಾಗಿ ಪ್ರಸ್ತಾಪಿತ ಪ್ರದೇಶವು ಮೂಲಭೂತವಾಗಿ ಕೆರೆಯ ಸ್ವರೂಪವನ್ನು ಕಳೆದುಕೊಂಡಿರುತ್ತದೆ. ಈ ನಿವೇಶನದಲ್ಲಿ ಯಾವುದೇ ಸಾರ್ವಜನಿಕ ಕಟ್ಟಡಗಳು ಇರುವುದಿಲ್ಲ ಹಾಗೂ ಯಾವುದೇ ಉದ್ದೇಶಕ್ಕೆ ಕಾಯ್ದಿರಿಸುವ ಪ್ರದೇಶವಾಗಿರುವುದಿಲ್ಲ ಮತ್ತು ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇರುವುದಿಲ್ಲವೆಂದು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ/65/ಎಲ್‌ಜಿಟಿ/2012, ಬೆಂಗಳೂರು, ದಿನಾಂಕ: 15ನೇ ಜನವರಿ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಮರಳೂರು ಗ್ರಾಮದ ಸ.ನಂ. 52ರಲ್ಲಿನ 11 ಗುಂಟೆ ವಿಸ್ತೀರ್ಣದ ಜಮೀನನ್ನು ಶ್ರೀ ಶ್ರೀ ಜಗದ್ಗುರು ರಂಭಾಪುರಿ ಪೀಠದ ರೇಣುಕಾಚಾರ್ಯ ಮಂದಿರ ನಿರ್ಮಾಣಕ್ಕಾಗಿ, ಕರ್ನಾಟಕ ಭೂ ಕಂದಾಯ ನಿಯಮಗಳ 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 19(1)(ಡಿ)ರನ್ವಯ ಜಮೀನಿನ ಮಾರ್ಗಸೂಚಿ ಬೆಲೆಯ ಶೇ. 25ರಷ್ಟು ಗುತ್ತಿಗೆ ದರ ವಿಧಿಸಿ. ಎರಡು ವರ್ಷಗಳಿಗೊಮ್ಮೆ ಶೇ. 10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿನೊಂದಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 132**

## ಆರ್ಥಿಕ ಸಚಿವಾಲಯ

**ವಿಷಯ:** 2013ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಆಇ 5 ಸೇನಿಸೇ 2012 ದಿನಾಂಕ : 14–06–2012

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 118(2) ಸೌಲಭ್ಯ ಪಡೆಯುವ ಸಲುವಾಗಿ, ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ (ಆಯಾ ವರ್ಷದ ಜನವರಿ 1 ರಿಂದ ಡಿಸೆಂಬರ್ 31ರ ಒಳಗೆ) 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ, ರಜಾ ವೇತನಕ್ಕೆ ಸಮನಾದ ನಗದೀಕರಣ ಪಡೆಯಬಹುದಾದ ಸೌಲಭ್ಯವನ್ನು ದಿನಾಂಕ : 01–01–2013 ರಿಂದ ಜಾರಿಗೊಳಿಸಲಾಗಿದೆ.

2013 ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವುದು ಅವಶ್ಯಕವೆಂದು ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 01 ಸೇನಿಸೇ 2013, ಬೆಂಗಳೂರು ದಿನಾಂಕ: 19ನೇ ಜನವರಿ, 2013**

2013ನೇ ಸಾಲಿನ ಅವಧಿಗೆ ಗರಿಷ್ಟ 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ ರಜಾ ವೇತನಕ್ಕೆ ಸಮನಾದ ನಗದೀಕರಣ ಸೌಲಭ್ಯ ಪಡೆಯುವ ಯೋಜನೆಯನ್ನು 01–01–2013 ರಿಂದ ಜಾರಿಗೊಳಿಸಿ ಈ ಕೆಳಕಂಡಂತೆ ನಿಯತಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಸಮೂಹ | ಮುಂಚಿತವಾಗಿ ಒಂದು ತಿಂಗಳ ನೋಟಿಸ್ ನೀಡಿ 2013ನೇ ಸಾಲಿನ ಅವಧಿಗೆ ನಗದೀಕರಣ ಸೌಲಭ್ಯ ಪಡೆಯುವ ಅವಧಿ |
|---|---|---|
| 1 | ಗ್ರೂಪ್ 'ಡಿ' ಸಮೂಹ | ಅವರ ಇಚ್ಛೆಯಂತೆ 2013 ರ ಕ್ಯಾಲೆಂಡರ್ ವರ್ಷದ ಯಾವುದೇ ತಿಂಗಳಲ್ಲಿ |
| 2 | ಉಳಿದ ಸಮೂಹ (ಎ,ಬಿ,ಸಿ) | ಅವರ ಇಚ್ಛೆಯಂತೆ ಏಪ್ರಿಲ್ 2013 ರಿಂದ ಡಿಸೆಂಬರ್ 2013ರ ವರೆಗಿನ ಯಾವುದೇ ತಿಂಗಳಲ್ಲಿ |

1. ಮೇಲೆ ವಿಧಿಸಿದ ನಿಬಂಧನೆಯು ಏನೇ ಇದ್ದಾಗ್ಯೂ ಜನವರಿಯಿಂದ ಮಾರ್ಚ್ 2013ರಲ್ಲಿ ನಿವೃತ್ತಿ ಹೊಂದುವ ಎಲ್ಲಾ ಅರ್ಹ ನೌಕರರು/ಅಧಿಕಾರಿಗಳು, ಅವರು ನಿವೃತ್ತಿ ಹೊಂದುವ ತಿಂಗಳಲ್ಲಿ ನಗದೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

2. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 118ರಲ್ಲಿ ನಿಯಮಿಸಿರುವಂತಹ ಗಳಿಕೆ ರಜೆ ನಗದೀಕರಣ ನಿಯಂತ್ರಣಕ್ಕೆ ಸಂಬಂಧಿಸಿದ ಇತರೆ ಷರತ್ತುಗಳು ಅನ್ವಯವಾಗುತ್ತದೆ.

3. ಈ ಆದೇಶವು ಈಗಾಗಲೇ ಈ ಸೌಲಭ್ಯ ವಿಸ್ತರಣೆಯಾಗಿರುವ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1)

**P.R. 146**

## ಆರ್ಥಿಕ ಸಚಿವಾಲಯ

**ವಿಷಯ :** ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 08 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಆಇ 123 ರಾಲೆಪ 2009 (ಭಾಗ), ದಿನಾಂಕ : 14–05–2012

2. ನಿಯಂತ್ರಕರ ಪತ್ರ ಸಂಖ್ಯೆ : ಸಿಎಸ್ಎ 1 ಇಟಿಪಿ 90/2012/4031, ದಿನಾಂಕ : 18–07–2012 & 14–09–2012

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 08 ಹುದ್ದೆಗಳನ್ನು ದಿನಾಂಕ : 27–01–2012 ರಿಂದ ಆರು ತಿಂಗಳ ಅವಧಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಪ್ರಥಮ ದರ್ಜೆ ಸಹಾಯಕರು | 03 |
| 04 | ದ್ವಿತೀಯ ದರ್ಜೆ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರಗಳಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿಯ 08 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 27–07–2012 ರಿಂದ ದಿನಾಂಕ : 31–03–2013ರ ಅವಧಿಯವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 123 ರಾಲೆಪ 2009, ಬೆಂಗಳೂರು ದಿನಾಂಕ: 30ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 27–07–2012 ರಿಂದ ದಿನಾಂಕ : 31–03–2013ರ ಅವಧಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಪ್ರಥಮ ದರ್ಜೆ ಸಹಾಯಕರು | 03 |
| 04 | ದ್ವಿತೀಯ ದರ್ಜೆ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**P.R. 147**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳಲ್ಲಿ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ–2 ಹುದ್ದೆಗಳ ನೇಮಕಾತಿಯಲ್ಲಿ ಮಹಿಳೆಯರಿಗೆ ವಿನಾಯಿತಿ ನೀಡುವ ಬಗ್ಗೆ

**ಓದಲಾಗಿದೆ :** 1. ಕ.ವಿ.ಪ್ರ.ನಿ.ನಿ.ದ ಪತ್ರ ಸಂಖ್ಯೆ : ಕವಿಪ್ರನಿನಿ/ಬಿ16/7962/2005–2006, ದಿನಾಂಕ : 17–08–2012 ಮತ್ತು ದಿನಾಂಕ : 09–10–2012.

2. ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಸೇವಾ ನಿಯಮಗಳು–1), ಇವರ ಟಿಪ್ಪಣಿ ಸಂಖ್ಯೆ : ಸಿಆಸುಇ 511 ಸೇನಿಎ 2012 ದಿನಾಂಕ : 01–01–2013.

**ಪ್ರಸ್ತಾವನೆ:**

ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ 9 (1ಬಿ)ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇರ ನೇಮಕಾತಿಯಲ್ಲಿ ಮಹಿಳೆಯರಿಗೆ ಶೇ. 30 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದ್ದು, ಈ ಮೀಸಲಾತಿಯನ್ನು ಕೆ.ಪಿ.ಟಿ.ಸಿ.ಎಲ್., ಮತ್ತು ಇತರೆ ಐದು ಎಸ್ಕಾಂಗಳಲ್ಲಿ ಅಗತ್ಯವಿರುವ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಯಿಂದ ವಿನಾಯಿತಿ ನೀಡಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರು ಕೋರಿರುತ್ತಾರೆ.

ಈ ಕೋರಿಕೆಗೆ ಈ ಕೆಳಕಂಡಂತೆ ಸಮರ್ಥನೆ ನೀಡಿರುತ್ತಾರೆ :–

ಕೆ.ಪಿ.ಟಿ.ಸಿ.ಎಲ್., ಮತ್ತು ಇತರೆ ಐದು ಎಸ್ಕಾಂಗಳಲ್ಲಿ ಅಗತ್ಯವಿರುವ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಯಲ್ಲಿ ನಿಯಮಾನುಸಾರ ಶೇ. 30 ರಷ್ಟು ಮಹಿಳೆಯರಿಗೆ ಮೀಸಲಾತಿ ಒದಗಿಸಿದಲ್ಲಿ ಆ ರೀತಿ ಆಯ್ಕೆಯಾದ ಮಹಿಳಾ ನೌಕರರು ಪುರುಷ ನೌಕರರಂತೆ ಕಂಬಗಳನ್ನು ಹತ್ತುವುದು ಗುಂಡಿಗಳನ್ನು ತೋಡುವುದು ಭಾರವಾದ ಸಾಮಗ್ರಿಗಳನ್ನು ಹೊತ್ತೊಯ್ಯುವಂತಹ ಕೆಲಸ ಮಾಡಲು ದೈಹಿಕ ಸಾಮರ್ಥ್ಯ ಹೊಂದಿರುವುದಿಲ್ಲ. ಅಲ್ಲದೆ ದೂರದ ಪ್ರದೇಶಗಳಲ್ಲಿ (ಕಾಡು, ಬೆಟ್ಟ) ಪುರುಷ ಸಹೋದ್ಯೋಗಿಗಳೊಂದಿಗೆ ಅವೇಳೆಯಲ್ಲಿ ಕೆಲಸ ಮಾಡುವ ಸಂದರ್ಭಗಳು ಒದಗಿ ಬರುತ್ತವೆ. ಇದು ಮಹಿಳಾ ಉದ್ಯೋಗಿಗಳ ರಕ್ಷಣೆಗೆ ಮಾರಕವಾಗಬಹುದಾಗಿತ್ತದೆ.

ಸದರಿ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ರಿಟ್ ಪಿಟಿಷನ್ ಸಂಖ್ಯೆ : 15599/2008ರ ಮೇಲೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 02–03–2012 ರಂದು ನೀಡಿರುವ ತೀರ್ಪಿನಲ್ಲಿ ಸೂಚಿಸಿರುವಂತೆ Institute for Social and Economic Change, Bangalore ಇವರಿಂದ ಸರ್ವೇ ಮಾಡಿಸಿದ್ದು, ಸದರಿ ಸಂಸ್ಥೆಯು ಸಲ್ಲಿಸಿರುವ ವರದಿಯಲ್ಲಿಯೂ ಸಹ ಮೇಲ್ಕಂಡ ಹುದ್ದೆಗಳ ನೇರ ನೇಮಕಾತಿಯಲ್ಲಿ ಮಹಿಳಾ ಉದ್ಯೋಗಿಗಳನ್ನು ನೇಮಿಸುವುದು ಸಮಂಜಸವಲ್ಲ. ಒಂದು ವೇಳೆ ನೇಮಕಾತಿ ಮಾಡಿದಲ್ಲಿ ಅವರಿಗೆ ಸೂಕ್ತ ರಕ್ಷಣೆ ಮತ್ತು ಭದ್ರತೆ ಒದಗಿಸಬೇಕಾಗುತ್ತದೆಂದು ನಮೂದಿಸಲಾಗಿದೆ.

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ಕೆ.ಪಿ.ಟಿ.ಸಿ.ಎಲ್., ಮತ್ತು ಇತರೆ ಐದು ಎಸ್ಕಾಂಗಳಲ್ಲಿ ಅಗತ್ಯವಿರುವ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇಮಕಾತಿಯಲ್ಲಿ ಶೇ. 30 ರಷ್ಟು ಮಹಿಳಾ ಅಭ್ಯರ್ಥಿಗಳಿಗೆ ಮೀಸಲಾತಿ ಕಲ್ಪಿಸುವುದರಿಂದ ವಿನಾಯಿತಿ ನೀಡುವ ಕೋರಿಕೆಯ ಕುರಿತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)ರವರ ಅಭಿಪ್ರಾಯ ಕೋರಲಾಗಿ, ಮೇಲೆ ಓದಲಾದ (2)ರಲ್ಲಿ ಸದರಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ರವರು ನೀಡಿರುವ ಅಭಿಪ್ರಾಯದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ನಿಗಮವಾಗಿದ್ದು, ಸರ್ಕಾರದ ಅಂಗ ಸಂಸ್ಥೆಯಾಗಿರುವುದರಿಂದ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಯಲ್ಲಿ ಮಹಿಳಾ ಮೀಸಲಾತಿಯಿಂದ ವಿನಾಯಿತಿ ನೀಡಲು ಸಹಮತಿ ನೀಡಲಾಗಿದೆ ಎಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 193 ಇಇಬಿ 2012, ಬೆಂಗಳೂರು, ದಿನಾಂಕ: 19ನೇ ಜನವರಿ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳಲ್ಲಿ ನಿರ್ವಹಣಾ ವೃಂದಗಳಾದ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳಲ್ಲಿ ಕೆಲಸ ನಿರ್ವಹಿಸಲು ದೈಹಿಕ ಸಾಮರ್ಥ್ಯದ ಅಗತ್ಯವಿರುವುದನ್ನು ಮತ್ತು ಮಹಿಳೆಯರು ಅವೇಳೆಯಲ್ಲಿ ದೂರದ ಪ್ರದೇಶಗಳಲ್ಲಿ ಪುರುಷ ಸಹದ್ಯೋಗಿಗಳೊಂದಿಗೆ ಕೆಲಸ ನಿರ್ವಹಿಸುವುದು ಕಷ್ಟಸಾಧ್ಯವಾಗುವುದನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮ 1977ರ ನಿಯಮ 9 (1ಬಿ) ಯ 3ನೇ ಪರಂತುಕದನ್ವಯ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಯಲ್ಲಿ ಶೇ. 30 ರಷ್ಟು ಮಹಿಳಾ ಮೀಸಲಾತಿಯಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 164

## ಆರ್ಥಿಕ ಸಚಿವಾಲಯ

**ವಿಷಯ:** ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ವೇತನ ಶ್ರೇಣಿಯ ಪರಿಷ್ಕರಣೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಆಇ 01 ಎಸ್‌ಆರ್‌ಪಿ 2008 ದಿನಾಂಕ : 16–01–2010

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16–01–2010ರ ಸರ್ಕಾರಿ ಆದೇಶದಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಎಲ್ಲಾ ಸರ್ಕಾರಿ ಇಲಾಖೆಗಳಲ್ಲಿನ ಪೂರ್ಣಕಾಲಿಕ ನೌಕರರ ವೇತನ ಶ್ರೇಣಿಯನ್ನು ರೂ. 2500–3850 ರಿಂದ ರೂ. 4800–7275ಕ್ಕೆ ದಿನಾಂಕ : 16–01–2010 ರಿಂದ

ಪರಿಷ್ಕರಿಸಲು ಮಂಜೂರಾತಿ ನೀಡಲಾಗಿತ್ತು. ದಿನಾಂಕ : 1ನೇ ಏಪ್ರಿಲ್ 2012 ರಿಂದ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು 2012 ರನ್ವಯ ಪರಿಷ್ಕರಿಸಿದ್ದರಿಂದಾಗಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ವೇತನ ಶ್ರೇಣಿಯನ್ನು ಪರಿಷ್ಕರಿಸುವ ಪ್ರಶ್ನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 02 ಎಸ್‌ಆರ್‌ಪಿ 2013, ಬೆಂಗಳೂರು ದಿನಾಂಕ: 17ನೇ ಜನವರಿ, 2013**

ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಎಲ್ಲಾ ಸರ್ಕಾರಿ ಇಲಾಖೆಗಳಲ್ಲಿನ ಪೂರ್ಣಕಾಲಿಕ ನೌಕರರ 2007ರ ವೇತನ ಶ್ರೇಣಿ ರೂ. 4800–7275ರನ್ನು ರೂ. 9600–14550ಕ್ಕೆ ದಿನಾಂಕ 1ನೇ ಏಪ್ರಿಲ್ 2012 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2012ರಲ್ಲಿನ ಉಪಬಂಧಗಳ ಪ್ರಕಾರ ಅವರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ದಿನಾಂಕ 01 ನೇ ಏಪ್ರಿಲ್ 2012 ರಿಂದ ಜಾರಿಗೆ ಬರುವಂತೆ ನಿಗದಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಎಸ್. ರಾಜಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2)

## FINANCE SECRETARIAT

**Sub :** Revision of pay scale of the whole time employees paid from contingencies.

**Read :** Government Order No. FD 01 SRP 2008, Dated : 16-01-2010

**Preamble :**

In Government Order dated ; 16-01-2010 read above, sanction was accorded for the revision of pay scale of the whole time employees paid from Contingencies in all Departments of Government from Rs. 2500-3850 to Rs. 4800-7275 with effect from 16-01-2010, Consequent on the general revision of the pay scales of the State Government Employees with effect from 1st April 2012 as per KCS (Revised Pay) Rules 2012, the question of revision of the pay scale of the whole time employees paid from Contingencies has been examined by the Government and the following orders are issued.

**GOVERNMENT ORDER NO. FD 2 SRP 2013, BANGALORE, DATED 17TH JANUARY, 2013**

Government are now pleased to revise the pay scale of the whole time employees paid from Contingencies in all Departments of Government who are drawing pay in the 2007 pay scale of Rs. 4800-7275 to Rs. 9600-14550 with effect from 1st April 2012.

Their pay shall be fixed in the revised pay scale in accordance with the provisions of Karnataka Civil Service (Revised Pay) Rules 2012, with effect from 1st April 2012.

By Order and in the name of the Governor of Karnataka,
**K. S. RAJALAKSHMI,**
Under Secretary to Government,
Finance Department (Services-2)

**P.R. 165**

## ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ವಿಷಯ :** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ – ಆದೇಶ

**ಓದಲಾಗಿದೆ :**
(1) ಅಧಿಸೂಚನೆ ಸಂಖ್ಯೆ : ಡಿಪಿಎಆರ್ 535 ಎಸ್‌ಎಎಸ್ 2012, ದಿನಾಂಕ : 05–09–2012.
(2) ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಮಮಅಇ/ಆ.ಶಾ–9/2012–13, ದಿನಾಂಕ : 20–10–2012.
(3) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1) ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 649 ಸೇಆಸೇ 2012, ದಿನಾಂಕ : 22–10–2012.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಅಧಿಸೂಚನೆಯನ್ವಯ ಶ್ರೀ ಡಿ. ಕೆ. ರಂಗಸ್ವಾಮಿ, ಭಾ.ಆ.ಸೇ. ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಇವರನ್ನು ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇಲ್ಲಿನ ಶ್ರೀಮತಿ ಪಿ. ಹೇಮಲತಾ, ಭಾ.ಆ.ಸೇ. ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ವರ್ಗಾಯಿಸಿ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಉಲ್ಲೇಖ (2)ರ ಅರೆ ಸರ್ಕಾರಿ ಪತ್ರದಲ್ಲಿ ಶ್ರೀ ಡಿ. ಕೆ. ರಂಗಸ್ವಾಮಿ, ಭಾ.ಆ.ಸೇ. ಇವರು ಸೂಪರ್ ಟೈಂ ಸ್ಕೇಲ್ ಅಧಿಕಾರಿಯಾಗಿರುವುದರಿಂದ ಸದರಿ ಹುದ್ದೆಯನ್ನು ಉನ್ನತೀಕರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)ಯು ಉಲ್ಲೇಖ (3)ರನ್ವಯ ಹೊರಡಿಸಿದ ಅನಧಿಕೃತ ಟಿಪ್ಪಣಿಯಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಯು ಐ.ಎ.ಎಸ್. ಸೀನಿಯರ್ ಸ್ಕೇಲ್ ಮೂಲದ ಹುದ್ದೆಯಾಗಿದ್ದು, ಶ್ರೀ ಡಿ. ಕೆ. ರಂಗಸ್ವಾಮಿ ಇವರು ಸೂಪರ್ ಟೈಂ ಸ್ಕೇಲ್ ಅಧಿಕಾರಿ ಯಾಗಿರುವುದರಿಂದ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಯನ್ನು ಐಎಎಸ್ ಸೂಪರ್ ಟೈಂ ಸ್ಕೇಲ್ ಪೇ ಬ್ಯಾಂಡ್ 4 ರೂ. 37,400–67,000 + ಜಿಪಿ ರೂ. 10,000ಗೆ ಉನ್ನತೀಕರಿಸಿ ಆದೇಶ ಹೊರಡಿಸುವಂತೆ ತಿಳಿಸಲಾಗಿದೆ.

ಮೇಲೆ ವಿವರಿಸಿದ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಹಾಲಿ ಜಾರಿಯಲ್ಲಿರುವ 1991ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ (1) ನಿರ್ದೇಶಕರ ಹುದ್ದೆಯನ್ನು ಭಾರತೀಯ ಆಡಳಿತ ಸೇವಾ ಅಧಿಕಾರಿಯಿಂದ ತುಂಬಲು ಅವಕಾಶ ಕಲ್ಪಿಸಿಕೊಳ್ಳಲಾಗಿದೆ. ಪ್ರಸ್ತುತ ಈ ಹುದ್ದೆಯನ್ನು ಐಎಎಸ್ ಸೂಪರ್ ಟೈಂ ಸ್ಕೇಲ್ ಪೇ ಬ್ಯಾಂಡ್ 4 ರೂ. 37,400–67,000 + ಜಿಪಿ ರೂ. 10,000 ರಡಿ ಉನ್ನತೀಕರಿಸಿ ವೇತನ ನಿಗದಿಗೊಳಿಸಿರುವುದರಿಂದ ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಎಂದು ಮರು ಪದನಾಮೀಕರಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಮಇ 170 ಸ್ತೀಮರ 2012, ಬೆಂಗಳೂರು, ದಿನಾಂಕ : 25–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಯನ್ನು ಐಎಎಸ್ ಸೂಪರ್ ಟೈಂ ಸ್ಕೇಲ್ ಪೇ ಬ್ಯಾಂಡ್ 4 ರೂ. 37,400–67,000 + ಜಿಪಿ ರೂ. 10,000ನಲ್ಲಿ **"ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಗೆ"** ದಿನಾಂಕ: 20–09–2012 ರ ಅಪರಾಹ್ನದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶ ಹೊರಡಿಸುವವರೆಗೆ ಉನ್ನತೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

**P.R. 166**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕು ಪುರದಾಳ ಕೆರೆಗೆ ನೀರು ತುಂಬಿಸುವ ಕಾಮಗಾರಿಗೆ ಹೆಚ್ಚಿನ ಅನುದಾನ ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರ ಸಂಖ್ಯೆ: ಮು.ಇಂ/ ಸನೀ(ಉ)ವ/ ಬಿಜೆಪಿ/ಪಿಬಿ–9/ಪುರದಾಳಕೆರೆ ತುಂಬಿಸುವುದು/2012–13/241, ದಿನಾಂಕ : 15–1–2013.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕು ಪುರದಾಳ ಕೆರೆಗೆ ನೀರು ತುಂಬಿಸುವ ಕಾಮಗಾರಿಯ 2012–13ನೇ ಸಾಲಿಗೆ ಮುಂದುವರಿಸಲಾದ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ಸಿದ್ದಪಡಿಸಿರುವ ರೂ. 384.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಮೇಲೆ ಓದಲಾದ ಪತ್ರದೊಂದಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ದೇಶಿತ ಯೋಜನೆಯಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ಏತ ನೀರಾವರಿ ಕಾಲುವೆಯಿಂದ 60 ಹೆಚ್.ಪಿ. ಸಾಮರ್ಥ್ಯದ 02 ಕಾರ್ಯನಿರತ ಹಾಗೂ ಒಂದು ಹೆಚ್ಚುವರಿ ಪಂಪುಗಳನ್ನು ಬಳಸಿ 600 ಮಿ.ಮಿ. ವ್ಯಾಸದ ಪಿ.ಎಸ್.ಸಿ. ಕೊಳವೆ ಮೂಲಕ ನೀರನ್ನು ಮೇಲೆತ್ತಿ ಪುರದಾಳ ಕೆರೆಗೆ ತುಂಬಿಸಿ ಪುರದಾಳ, ಬೋರ್ಗಿ, ಬ್ಯಾಕೋಡ ಗ್ರಾಮಗಳ ಮುಂಗಾರು ಮತ್ತು ಹಿಂಗಾರು ಬೆಳೆಗಳ ಸುಮಾರು 235 ಹೆಕ್ಟೇರ್ (ಬಾಧಿತ ಅಚ್ಚುಕಟ್ಟು) ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಈ ಯೋಜನೆಯ ಲಾಭ ವೆಚ್ಚದ ಅನುಪಾತ ಶೇಕಡಾ 10 ರ ದರದಲ್ಲಿ 1.76 ಆಗಿದ್ದು. ಆರ್ಥಿಕವಾಗಿ ಶಕ್ಯವಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲ್ಕಂಡ ಅಂದಾಜಿಗೆ ಲೆಕ್ಕಶೀರ್ಷಿಕೆ 4702–00–101–03–01–139 ಏತ ನೀರಾವರಿ ಯೋಜನೆ–ಪ್ರಧಾನ ಕಾಮಗಾರಿಗಳು ಅಡಿಯಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 24 ಏನೀಯೋ 2013 (ತಾಂತ್ರಿಕ), ಬೆಂಗಳೂರು, ದಿನಾಂಕ : 19ನೇ ಜನವರಿ 2013.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕು ಪುರದಾಳ ಕೆರೆಗೆ ನೀರು ತುಂಬಿಸುವ ಕಾಮಗಾರಿಯ ರೂ. 384.00 ಲಕ್ಷ ಮೊತ್ತದ ಅಂದಾಜಿಗೆ (ರೂ. ಮೂರು ಕೋಟಿ ಎಂಬತ್ತನಾಲ್ಕು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರವು ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ದಾಖಲಿಸುವುದು.
2. ಕಾಮಗಾರಿಗಳ ವಿವಿಧ ಅನುಷ್ಠಾನ ಹಂತದ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
3. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
4. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
5. ತಾಂತ್ರಿಕ ಸಮಿತಿ/ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆಯತಕ್ಕದ್ದು.
6. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.

7. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
8. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
9. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 190**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಕಛೇರಿಯನ್ನು ಪ್ರಾರಂಭಿಸುವ ಬಗ್ಗೆ ಆದೇಶ.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರ ಸಂಖ್ಯೆ : ಮುಸದ/ಸಿ.ಶಾ–2/ಸಿಬ್ಬಂದಿ–22/65/ಉವಿಸ್ಯ/2012/1228, ದಿನಾಂಕ: 14–5–2012.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 14–5–2012ರ ಪತ್ರದಲ್ಲಿ ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ವಿಭಾಗ, ತುಮಕೂರು ವ್ಯಾಪ್ತಿಯಲ್ಲಿ ತುಮಕೂರು ಹಾಗೂ ತಿಪಟೂರು ಕೇಂದ್ರಸ್ಥಾನಗಳಲ್ಲಿ ಸಣ್ಣ ನೀರಾವರಿ ಉಪ ವಿಭಾಗಗಳಿದ್ದು, ಇವು ಕ್ರಮವಾಗಿ 247 ಹಾಗೂ 180 ಕೆರೆಗಳು ಅನುಕ್ರಮವಾಗಿ 21,616 ಹಾಗೂ 18,020 ಅಚ್ಚುಕಟ್ಟನ್ನು ಹೊಂದಿರುತ್ತದೆ. ಈಗಿರುವ ಭೌತಿಕ ಕಾರ್ಯಕ್ಷೇತ್ರದ ಅನುಸಾರ ಸಣ್ಣ ನೀರಾವರಿ ಉಪ ವಿಭಾಗ, ತುಮಕೂರು ವ್ಯಾಪ್ತಿಯಿಂದ ಪಾವಗಡ ತಾಲ್ಲೂಕನ್ನು ಹಾಗೂ ಸಣ್ಣ ನೀರಾವರಿ ಉಪ ವಿಭಾಗ, ತಿಪಟೂರು ವ್ಯಾಪ್ತಿಯಿಂದ ಶಿರಾ ಮತ್ತು ಚಿಕ್ಕನಾಯ್ಕನಹಳ್ಳಿ ತಾಲ್ಲೂಕುಗಳ ಸಣ್ಣ ನೀರಾವರಿ ಕೆರೆಗಳ ಉಸ್ತುವಾರಿಯನ್ನು ನಡೆಸುವ ಸಲುವಾಗಿ ಶಿರಾದಲ್ಲಿ ಕೇಂದ್ರಸ್ಥಾನವನ್ನಾಗಿಸಿ, ಒಂದು ಹೊಸ ಉಪ ವಿಭಾಗವನ್ನು ಆರಂಭಿಸಿದಲ್ಲಿ ತಿಪಟೂರು ಕೇಂದ್ರಸ್ಥಾನದಿಂದ 120 ಕಿ.ಮೀ ಅಂತರದಲ್ಲಿರುವ ಶಿರಾ ತಾಲ್ಲೂಕಿಗೆ ಹಾಗೂ ತುಮಕೂರು 98 ಕಿ.ಮೀ. ದೂರದಲ್ಲಿರುವ ಪಾವಗಡ ತಾಲ್ಲೂಕಿಗೆ ಓಡಾಡುವ ಅವಧಿ ಕಡಿಮೆಗೊಳಿಸಿ, ಸಣ್ಣ ನೀರಾವರಿ ಅಭಿವೃದ್ಧಿ ಯೋಜನೆಗಳನ್ನು ಸುಗಮವಾಗಿ ನಿರ್ವಹಿಸಲು ಪೂರಕ ವೃಂದ ಬಲದೊಂದಿಗೆ ಅನುಕೂಲವಾಗುವಂತೆ ತುಮಕೂರು ಜಿಲ್ಲೆಯ ಶಿರಾ ಕೇಂದ್ರ ಸ್ಥಾನದಲ್ಲಿ ಒಂದು ಸಣ್ಣ ನೀರಾವರಿ ಉಪ ವಿಭಾಗವನ್ನು ಸೃಜಿಸುವಂತೆ ಕೋರಿರುತ್ತಾರೆ.

ಅದರಂತೆ ಹೊಸದಾಗಿ ಸಣ್ಣ ನೀರಾವರಿ ಉಪ ವಿಭಾಗ ಶಿರಾ ಕಛೇರಿಯನ್ನು ತೆರೆಯಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 19 ಸೇಸಇ 2012, ಬೆಂಗಳೂರು, ದಿನಾಂಕ : 10ನೇ ಜನವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿರಾದಲ್ಲಿ ಒಂದು ಹೊಸದಾಗಿ ಸಣ್ಣ ನೀರಾವರಿ ಉಪ ವಿಭಾಗ, ಕಛೇರಿಯನ್ನು ತೆರೆಯಲು ಸೃಜಿಸಿದ ವೃಂದ ಬಲದೊಂದಿಗೆ ಹಾಗೂ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ಸಣ್ಣ ನೀರಾವರಿ ವೃತ್ತ, ಮೈಸೂರು ಮತ್ತು ಬೆಂಗಳೂರು ಹಾಗೂ ಸಣ್ಣ ನೀರಾವರಿ ವಿಭಾಗ, ತುಮಕೂರಿನಿಂದ ಸ್ಥಳಾಂತರಿಸಿಕೊಂಡ ಹಾಗೂ ಮಂಜೂರಾದ ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸಣ್ಣ ನೀರಾವರಿ ಉಪ ವಿಭಾಗ ಶಿರಾ ಕಛೇರಿಯನ್ನು ತೆರೆಯಲು ಕೂಡಲೇ ಜಾರಿಗೆ ಬರುವಂತೆ ಮಂಜೂರಾತಿ ನೀಡಲಾಗಿದೆ.

ಶಿರಾದಲ್ಲಿ ಹೊಸದಾಗಿ ತೆರೆಯುವ ಸಣ್ಣ ನೀರಾವರಿ ಉಪ ವಿಭಾಗದ ಪೂರಕ ವೃಂದ ಬಲದ ಹಾಗೂ ಸ್ಥಳಾಂತರಿಸಿದ ಹುದ್ದೆಗಳ ವಿವರಗಳ ಪಟ್ಟಿಯನ್ನು ಅನುಬಂಧ–1 ರಲ್ಲಿ ಒದಗಿಸಲಾಗಿದೆ.

ಹೊಸದಾಗಿ ಪ್ರಾರಂಭಿಸಲಾಗುವ ಸಣ್ಣ ನೀರಾವರಿ ಉಪ ವಿಭಾಗ ಶಿರಾದ ಕಾರ್ಯವ್ಯಾಪ್ತಿ, ಕಛೇರಿ/ಪೀಠೋಪಕರಣ ವ್ಯವಸ್ಥೆ, ಸಿಬ್ಬಂದಿ ಭರ್ತಿ ಇತ್ಯಾದಿಗಳ ಬಗ್ಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಕ್ರಮ ಜರುಗಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 790 ಎಫ್‌ಸಿ–1/12 ದಿನಾಂಕ :10–1–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಸರ್ಕಾರದ ಆದೇಶ ಸಂಖ್ಯೆ : ಸನೀಇ 19 ಸೇಸುಇ 2012, ಬೆಂಗಳೂರು, ದಿನಾಂಕ : 10ನೇ ಜನವರಿ 2013ಕ್ಕೆ ಅನುಬಂಧ**

**ತುಮಕೂರು ಜಿಲ್ಲೆ, ಶಿರಾದಲ್ಲಿ ಹೊಸದಾಗಿ ಪ್ರಾರಂಭಸಲ್ಪಡುವ ಸಣ್ಣ ನೀರಾವರಿ ಉಪ ವಿಭಾಗದ ಸಿಬ್ಬಂದಿಗಳ ವಿವರ**

| ಕ್ರ ಸಂ. | ಹುದ್ದೆಗಳ ಪದನಾಮ | ಸೃಜಿಸಿದ ಹುದ್ದೆಗಳು | ಮುಖ್ಯ ಇಂಜಿನಿಯರ್ ಸ.ನೀ. (ದ)ವ ಬೆಂಗಳೂರುನಿಂದ ಸ್ಥಳಾಂತರಿಸ ಬೇಕಾದ ಹುದ್ದೆಗಳು | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ/ ಬೆಂಗಳೂರು/ ಮೈಸೂರುನಿಂದ ಸ್ಥಳಾಂತರಿಸ ಬೇಕಾದ ಹುದ್ದೆಗಳು | ಸಣ್ಣ ನೀರಾವರಿ ವಿಭಾಗ, ತುಮಕೂರುನಿಂದ ಸ್ಥಳಾಂತರಿಸ ಬೇಕಾದ ಹುದ್ದೆಗಳು |
|---|---|---|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 | 1 | – | – |
| 2. | ಸಹಾಯಕ ಇಂಜಿನಿಯರ್ | 2 | – | 2 | – |
| 3. | ಕಿರಿಯ ಇಂಜಿನಿಯರ್ | 3 | – | – | 1 |
| 4. | ಪ್ರಥಮ ದರ್ಜೆ ಸಹಾಯಕರು | – | – | – | 1 |
| 5. | ಪ್ರಥಮ ದರ್ಜೆ ಭೂಮಾಪಕರು | ಸದ್ಯಕ್ಕೆ ಅವಶ್ಯಕತೆ ಇರುವುದಿಲ್ಲ. | | | |
| 6. | ದ್ವಿತೀಯ ದರ್ಜೆ ಸಹಾಯಕರು | – | – | – | 1 |
| 7. | ಬೆರಳಚ್ಚುಗಾರರು | 1 | 1 | – | – |
| 8. | ವಾಹನ ಚಾಲಕರು | 1 | – | – | – |
| 9. | ಜವಾನರು | – | – | – | 1 |
| 10. | ಕಾವಲುಗಾರರು | ಸದ್ಯಕ್ಕೆ ಅವಶ್ಯಕತೆ ಇರುವುದಿಲ್ಲ | | | |
| | **ಒಟ್ಟು** | **7** | **02** | **02** | **04** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 183**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಸಂಖ್ಯಾಬಲದ ಕೊರತೆ ಇರುವ ಮೆಟ್ರಿಕ್–ಪೂರ್ವ ವಿದ್ಯಾರ್ಥಿನಿಲಯಗಳನ್ನು ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನಾಗಿ ಪರಿವರ್ತಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಹಿಂವಕನಿ/ ವನಿಶಾ–2/ಸಿಆರ್.09/2011–12, ದಿನಾಂಕ : 26–4–2012.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ ಕೊಡಗು ಜಿಲ್ಲೆಯ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಭಾಗಮಂಡಲ, ಮಡಿಕೇರಿ ತಾ ಮತ್ತು ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ವಿರಾಜಪೇಟೆ, ವಿರಾಜಪೇಟೆ ತಾ॥ ಮತ್ತು ಶಿವಮೊಗ್ಗ ಜಿಲ್ಲೆಯ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಆಶ್ರಯ ಕಾಲೋನಿ, ಭದ್ರಾವತಿ ಟೌನ್, ಇವುಗಳಲ್ಲಿ 2011–12ನೇ ಸಾಲಿಗೆ ಸಾಕಷ್ಟು ಸಂಖ್ಯೆಯಲ್ಲಿ ಅರ್ಜಿಗಳು ಬಾರದೇ ಇರುವುದರಿಂದ, ಸಂಖ್ಯಾಬಲದ ಕೊರತೆಯಾಗಿರುವ ಈ ವಿದ್ಯಾರ್ಥಿನಿಲಯಗಳನ್ನು ಪರಿವರ್ತಿಸಿ ಕ್ರಮವಾಗಿ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ, ಭಾಗಮಂಡಲ, ಮಡಿಕೇರಿ ತಾ: ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ ವಿರಾಜಪೇಟೆ, ವಿರಾಜಪೇಟೆ ತಾ: ಹಾಗೂ ಶಿವಮೊಗ್ಗ ಜಿಲ್ಲೆಯ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ, ಆಶ್ರಯ ಕಾಲೋನಿ, ಭದ್ರಾವತಿ ಟೌನ್, ಎಂದು ಪರಿವರ್ತಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಆದರೆ, ಈ ಪೈಕಿ ಶಿವಮೊಗ್ಗ ಜಿಲ್ಲೆಯ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಆಶ್ರಯ ಕಾಲೋನಿ, ಭದ್ರಾವತಿ ಟೌನ್ ಇದನ್ನು ಸರ್ಕಾರದ ಆದೇಶ ಸಂಖ್ಯೆ : ಸಕಇ 206 ಬಿಎಂಎಸ್ 2012, ದಿನಾಂಕ : 23–6–2012ರ ಆದೇಶದಲ್ಲಿ ಮೆಟ್ರಿಕ್ ನಂತರದ ಪುರಷರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ಆದೇಶಿಸಲಾಗಿದೆ.

ಅದರಂತೆ ಸದರಿ ವಿಷಯದ ಬಗ್ಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 204 ಬಿಎಂಎಸ್ 2012, ಬೆಂಗಳೂರು, ದಿನಾಂಕ : 6–9–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೊಡಗು ಜಿಲ್ಲೆಯ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಭಾಗಮಂಡಲ, ಮಡಿಕೇರಿ ತಾ: ಮತ್ತು ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ವಿರಾಜಪೇಟೆ, ವಿರಾಜಪೇಟೆ ತಾ: ಇವುಗಳನ್ನು ಕ್ರಮವಾಗಿ ಮೆಟ್ರಿಕ್ ನಂತರದ

ಬಾಲಕರ ವಿದ್ಯಾರ್ಥಿನಿಲಯ, ಭಾಗಮಂಡಲ, ಮಡಿಕೇರಿ ತಾ: ಕೊಡಗು ಜಿಲ್ಲೆ ಮತ್ತು ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ ವಿರಾಜಪೇಟೆ, ವಿರಾಜಪೇಟೆ ತಾ: ಕೊಡಗು ಜಿಲ್ಲೆ ಎಂದು ಪರಿವರ್ತಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 167**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಧ್ಯಾನಯೋಗಿ ಶ್ರೀ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ., ಹಿರೇಬೇವನೂರು ಗ್ರಾಮ ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 1750 ಟಿಸಿಡಿ ಇಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/29/2012–13, ದಿನಾಂಕ: 27–12–2012

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿ ರವರ ದಿನಾಂಕ : 27–12–2012ರ ಪತ್ರದಲ್ಲಿ ಧ್ಯಾನಯೋಗಿ ಶ್ರೀ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ. ಹಿರೇಬೇವನೂರು ಗ್ರಾಮ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 1750 ಟಿಸಿಡಿ ಇಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿರುತ್ತಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 06 ಎಸ್‌ಜಿಎಫ್ 2013, ಬೆಂಗಳೂರು, ದಿನಾಂಕ : 29–1–2013.**

ಧ್ಯಾನಯೋಗಿ ಶ್ರೀ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ. ಹಿರೇಬೇವನೂರು ಗ್ರಾಮ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 1750 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸುವ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

1. ಸಂಬಂಧಪಟ್ಟ ಕಾರ್ಖಾನೆಗೆ ಹಂಚಿಕೆ ಮಾಡಲಾದ ಪ್ರದೇಶಗಳಲ್ಲಿ ಸಾಕಷ್ಟು ಕಬ್ಬಿನ ಲಭ್ಯತೆ ಇರಬೇಕು.
2. ಅಕ್ಕಪಕ್ಕದ ಕಾರ್ಖಾನೆಗಳಿಗೆ ಅಗತ್ಯವಿರುವ ಕಬ್ಬಿನ ಲಭ್ಯತೆಗೆ ಯಾವುದೇ ತೊಂದರೆಯಾಗದಂತಿರತಕ್ಕದ್ದು.
3. ಕಾರ್ಖಾನೆಯ ಕಬ್ಬು ನುರಿಸುವ ಸಾಮರ್ಥ್ಯವನ್ನು ಹೆಚ್ಚಿಸಿದ ನಂತರ ಬೇಕಾಗುವ ಹೆಚ್ಚುವರಿ ಕಬ್ಬನ್ನು ಅವರಿಗೆ ಹಾಲಿ ಹಂಚಿಕೆಯಾಗಿರುವ ಗ್ರಾಮಗಳ ಮೀಸಲು ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಸರಿದೂಗಿಸಿಕೊಳ್ಳಬೇಕು ಮತ್ತು ಹೊಸದಾಗಿ ಗ್ರಾಮಗಳನ್ನು ಹಂಚುವಂತೆ ಬೇಡಿಕೆ ಸಲ್ಲಿಸಬಾರದು.
4. ಕಬ್ಬು ಅರೆಯುವ ಸಾಮರ್ಥ್ಯ ಹೆಚ್ಚಿಸಿಕೊಳ್ಳಲು ಅವಶ್ಯಕ ಬಂಡವಾಳವನ್ನು ಕಾರ್ಖಾನೆಯಿಂದ ಭರಿಸತಕ್ಕದ್ದು.
5. ವಿಸ್ತರಿಸಿದ ಸಾಮರ್ಥ್ಯಕ್ಕೆ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಪರಮೇಶ್ವರಪ್ಪ**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR. 186**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** 2012–13ನೇ ಸಾಲಿಗೆ ವಿವಿಧ ಕೋರ್ಸುಗಳಿಗೆ ಮರುಪಾವತಿಸಬೇಕಾದ ಶುಲ್ಕವನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಕಇ 357 ಬಿಎಂಎಸ್ 2012, ದಿನಾಂಕ: 7–12–2012.
2. ಆಯುಕ್ತರು, ಏಕ ಕಡತ ಸಂಖ್ಯೆ : ಹಿಂವಕನಿ/ವಿವೇ/ಸಿಆರ್–19/2012–13, ದಿನಾಂಕ: 22–11–2012.

**ಪ್ರಸ್ತಾವನೆ :**

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕಾ ವಿನಾಯಿತಿ/ಮರುಪಾವತಿ ಯೋಜನೆಯನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ. ಪ್ರತಿ ವರ್ಷಕ್ಕೆ ವಿವಿಧ ಕೋರ್ಸುಗಳಿಗೆ ಮರುಪಾವತಿಗಾಗಿ ನಿಗಧಿಪಡಿಸಬೇಕಾದ ಶುಲ್ಕಗಳ ದರಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಮಿತಿ ನಿರ್ಧರಿಸಬೇಕೆಂದು ಈ ಆದೇಶದಲ್ಲಿ ತಿಳಿಸಲಾಗಿದೆ.

ಸಮಿತಿಯು ದಿನಾಂಕ : 20–11–2012ರಲ್ಲಿ ಸಭೆ ಸೇರಿ ವಿವಿಧ ಕೋರ್ಸುಗಳಿಗೆ 2012–13ನೇ ಸಾಲಿಗೆ ನಿಗಧಿಪಡಿಸಬಹುದಾದ ದರಗಳನ್ನು ನಿರ್ಧರಿಸಿರುವುದಾಗಿ ತಿಳಿಸಿ, ಆಯುಕ್ತರು ಉಲ್ಲೇಖ (2)ರ ಪತ್ರದಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಈ ಕೆಳಗಿನಂತೆ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಸಕಇ 357 ಬಿಎಂಎಸ್ 2012, ಬೆಂಗಳೂರು, ದಿನಾಂಕ : 22–11–2012.**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ವಿವಿಧ ಕೋರ್ಸುಗಳಲ್ಲಿ 2012–13ನೇ ಸಾಲಿನಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ, ಶುಲ್ಕ ವಿನಾಯಿತಿಗೆ ಒಳಪಡುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ ಪ್ರಯೋಗಾಲಯ ಶುಲ್ಕ (ವಿಜ್ಞಾನ, ವೈದ್ಯಕೀಯ

ಮತ್ತು ತಾಂತ್ರಿಕ ಕೋರ್ಸುಗಳಿಗೆ), ಕ್ರೀಡಾ ಶುಲ್ಕ ಮತ್ತು ಗ್ರಂಥಾಲಯ ಶುಲ್ಕ, ಇವುಗಳನ್ನು ಯಾವ ದರದಲ್ಲಿ ಪಾವತಿಸಬೇಕೆಂಬುದನ್ನು ಅನುಬಂಧದಲ್ಲಿ ಕೊಡಲಾಗಿದೆ.

**ಷರತ್ತುಗಳು :**

1. ಸಮಿತಿಯು ನಿಗಧಿಪಡಿಸಿರುವ ಶುಲ್ಕ ಅಥವಾ ಆಯಾ ಶಿಕ್ಷಣ ಸಂಸ್ಥೆ/ವಿಶ್ವ ವಿದ್ಯಾನಿಲಯ ಆ ಕೋರ್ಸಿಗೆ 2012–13ನೇ ಸಾಲಿಗೆ ನಿಗಧಿಪಡಿಸಿರುವ ಶುಲ್ಕ. ಈ ಶುಲ್ಕಗಳಲ್ಲಿ ಯಾವುದು ಕಡಿಮೆಯೋ ಅಷ್ಟನ್ನು ಮಾತ್ರ ಪಾವತಿಸತಕ್ಕದ್ದು.
2. 2012–13ನೇ ಸಾಲಿಗೆ ಶಿಕ್ಷಣ ಸಂಸ್ಥೆ/ವಿಶ್ವವಿದ್ಯಾನಿಲಯ ನಿಗಧಿಪಡಿಸಿರುವ ದರಗಳನ್ನು ಮುಂದಿನ ಮೂರು ಶೈಕ್ಷಣಿಕ ವರ್ಷಗಳವರೆಗೆ ಮುಂದುವರಿಸತಕ್ಕದ್ದು.
3. ಸರ್ಕಾರಿ, ಅನುದಾನಿತ ಹಾಗೂ ಅನುದಾನ ರಹಿತ ಸಂಸ್ಥೆಗಳಲ್ಲಿ/ಕಾಲೇಜುಗಳಲ್ಲಿ ಪ್ರವೇಶ ಹೊಂದಿದ ವಿದ್ಯಾರ್ಥಿಗಳಿಗೆ, ಯಾವುದೇ ಕೋರ್ಸುಗಳಿಗೆ ರಾಜ್ಯ ಸರ್ಕಾರವು ಶುಲ್ಕದ ದರಗಳನ್ನು ನಿಗಧಿಪಡಿಸಿದ್ದಲ್ಲಿ, ಆ ಆದೇಶದಲ್ಲಿ ನಿಗಧಿಪಡಿಸಿದ ದರಗಳಂತೆ ಶುಲ್ಕ ಮರುಪಾವತಿ ಮಾಡುವುದು.
4. ಯಾವ ಕೋರ್ಸುಗಳಿಗೆ ರಾಜ್ಯ ಸರ್ಕಾರವು ಶುಲ್ಕದ ದರಗಳನ್ನು ನಿಗಧಿಪಡಿಸಿರುವುದಿಲ್ಲವೋ ಅಂತಹ ಕೋರ್ಸುಗಳಿಗೆ ಅನುಬಂಧದಲ್ಲಿ ಸಮಿತಿ ತೀರ್ಮಾನಿಸುವ ದರಗಳಂತೆ ಶುಲ್ಕ ಮರುಪಾವತಿಯನ್ನು ಮಾಡುವುದು.
5. ಈ ಪಟ್ಟಿಯಲ್ಲಿ ಯಾವುದಾದರೂ ಕೋರ್ಸು ಬಿಟ್ಟು ಹೋಗಿದ್ದಲ್ಲಿ ಅದನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಗಮನಕ್ಕೆ ತರುವುದು. ಇವುಗಳಿಗೆ ನಿಗಧಿಪಡಿಸಬೇಕಾದ ದರಗಳನ್ನು ಸಮಿತಿಯ ಅಧ್ಯಕ್ಷರು, ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಮತ್ತು ಸದಸ್ಯ ಕಾರ್ಯದರ್ಶಿಗಳು ತೀರ್ಮಾನಿಸುತ್ತಾರೆ.

ಎಂಬ ಷರತ್ತುಗಳಿಗೆ ಒಳಪಟ್ಟು ಈ ಆದೇಶವನ್ನು ಹೊರಡಿಸಲಾಗಿದೆ.

ಈ ವೆಚ್ಚವನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಜಿಲ್ಲಾ ವಲಯ ಯೋಜನೇತರ ಲೆಕ್ಕ ಶೀರ್ಷಿಕೆ 2225–00–103–0–28 ಹಿಂದುಳಿದ ವರ್ಗಗಳಿಗೆ ಇತರೆ ರಿಯಾಯಿತಿಗಳು ಈ ಬಾಬ್ತಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಜಿ. ಮುಳಕೂರ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಅಸಂಖ್ಯೆ : ಸಕಇ 357 ಬಿಎಂಎಸ್ 2012, ಬೆಂಗಳೂರು, ದಿನಾಂಕ : 22–11–2012ಕ್ಕೆ**

**ಅನುಬಂಧ**

2012–13ನೇ ಸಾಲಿಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ವಿವಿಧ ಕೋರ್ಸುಗಳಿಗೆ ಶುಲ್ಕ ಮರುಪಾವತಿಸಲು ನಿಗಧಿಪಡಿಸಿದ ವಿವಿಧ ಶುಲ್ಕಗಳ ದರಗಳು (ದಿನಾಂಕ : 20–11–2012 ರಂದು ಜರುಗಿದ ಸಮಿತಿಯ ಸಭೆಯಲ್ಲಿ ತೀರ್ಮಾನಿಸಿದಂತೆ)

| ಕ್ರ. ಸಂ. | ಕೋರ್ಸಿನ ಹೆಸರು | ಪರೀಕ್ಷಾ ಶುಲ್ಕ | ಬೋಧನಾ ಶುಲ್ಕ | ಪ್ರಯೋಗಾಲಯ ಶುಲ್ಕ | ಕ್ರೀಡಾ ಶುಲ್ಕ | ಗ್ರಂಥಾಲಯ ಶುಲ್ಕ | ಒಟ್ಟು |
|---|---|---|---|---|---|---|---|
| 1. | ಪಿ.ಹೆಚ್.ಡಿ. | 5000 | 5000 | 5000 | 500 | 2000 | 17500 |
| 2. | ಎಂ.ಬಿ.ಎ. | 2000 | 35000 | 2000 | 500 | 500 | 40000 |
| 3. | ಎಂ.ಸಿ.ಎ. | | | | | | |
| 4. | ಎಂ.ಎಫ್.ಎ | | | | | | |
| 5. | ಎಂ.ಟೆಕ್. | 2000 | 20000 | 2000 | 500 | 500 | 25000 |
| 6. | ಎಂ.ಇ. | | | | | | |
| 7. | ಎಂ.ಫಿಲ್ | 2000 | 5000 | 2000 | 500 | 1000 | 10500 |
| 8. | ಎಲ್.ಎಲ್.ಎಂ. | | | | | | |
| 9. | ಎಂ.ಎಸ್.ಸಿ. ಎಜಿ. | 2000 | 3000 | 2000 | 500 | 1000 | 8500 |
| 10. | ಎಂ.ಎಸ್.ಸಿ. ಬಯೋಟೆಕ್ | | | | | | |
| 11. | ಎಂ.ಎಡ್. | 1000 | 10000 | 1000 | 500 | 500 | 13000 |
| 12. | ಎಲ್.ಎಲ್.ಬಿ. | | | | | | |
| 13. | ಎಂ.ಎಸ್.ಸಿ. | 1000 | 5000 | 2000 | 500 | 500 | 9000 |

| ಕ್ರ. ಸಂ. | ಕೋರ್ಸಿನ ಹೆಸರು | ಪರೀಕ್ಷಾ ಶುಲ್ಕ | ಬೋಧನಾ ಶುಲ್ಕ | ಪ್ರಯೋಗಾಲಯ ಶುಲ್ಕ | ಕ್ರೀಡಾ ಶುಲ್ಕ | ಗ್ರಂಥಾಲಯ ಶುಲ್ಕ | ಒಟ್ಟು |
|---|---|---|---|---|---|---|---|
| 14. | ಬಿ.ಎಸ್.ಸಿ. ಎಜಿ. | | | | | | |
| 15. | ಬಿ.ಮ್ಯೂಸಿಕ್ | | | | | | |
| 16. | ಬಿ.ಟಿ.ಎ | | | | | | |
| 17. | ಬಿ.ಎಫ್.ಎ. | | | | | | |
| 18. | ಗೃಹ ವಿಜ್ಞಾನ | | | | | | |
| 19. | ಬಿ.ಹೆಚ್.ಎಂ. | | | | | | |
| 20. | ಬಿ.ಪಿ.ಇ.ಡಿ | 1000 | 5000 | 1000 | 1000 | 500 | 8500 |
| 21. | ಎಂ.ಎ. | | | | | | |
| 22. | ಎಂ.ಎಸ್. ಡಬ್ಲ್ಯೂ | | | | | | |
| 23. | ಎಂ.ಟಿ.ಎ. | | | | | | |
| 24. | ಎಂ.ಎಫ್.ಎಂ. | | | | | | |
| 25. | ಎಂ.ಡಿ.ಎ. | | | | | | |
| 26. | ಎಂ.ಪಿ.ಬಿ. | | | | | | |
| 27. | ಬಿ.ಬಿ.ಎಂ. | | | | | | |
| 28. | ಬಿ.ಸಿ.ಎ. | | | | | | |
| 29. | ಬಿ.ಕಾಂ. | | | | | | |
| 30. | ಎಂ.ಕಾಂ. | | | | | | |
| 31. | ಬಿ.ಎಸ್.ಡಬ್ಲ್ಯೂ. | | | | | | |
| 32. | ಎಲ್ಲಾ ಪಿ.ಜಿ. ಡಿಪ್ಲೋಮಾ | | | | | | |
| 33. | ಬಿ.ಎಡ್. | 1000 | 3000 | 1000 | 500 | 500 | 6000 |
| 34. | ಬಿ.ಎಸ್.ಸಿ. | 1000 | 2000 | 1000 | 500 | 500 | 5000 |
| 35. | ಬಿ.ಎ. | 100 | 1000 | 500 | 500 | 500 | 3500 |
| 36. | ಡಿ.ಎಡ್. | 100 | 1000 | 200 | 100 | 200 | 1600 |
| 37. | ಡಿ.ಪಿ.ಎ.ಡಿ. | | | | | | |
| 38. | ಬಿ.ಹೆಚ್.ಎಂ.ಎಸ್. (ಹೋಮಿಯೋಪತಿ ಮೆಡಿಷನ್) | ಸರ್ಕಾರ ನಿಗಧಿಪಡಿಸಿ ದರದಂತೆ | | | | | |
| 39. | ಬಿ.ಎ.ಎಂ.ಎಸ್. | | | | | | |
| 40. | ಜೆ.ಟಿ.ಟಿ.ಸಿ. | ಸರ್ಕಾರ ನಿಗಧಿಪಡಿಸಿ ದರದಂತೆ (ಜೆ.ಟಿ.ಟಿ.ಸಿ) | | | | | |
| 41. | ಬಿ.ಇ. | ಸರ್ಕಾರಿ, ಅನುದಾನಿತ ಹಾಗೂ ಅನುದಾನ ರಹಿತ ಸಂಸ್ಥೆಗಳಲ್ಲಿ (ಕಾಲೇಜುಗಳಲ್ಲಿ) ಪ್ರವೇಶ ಹೊಂದುವ ವಿದ್ಯಾರ್ಥಿಗಳಿಗೆ ಸರ್ಕಾರ ನಿಗಧಿಪಡಿಸಿದ ದರಗಳಲ್ಲಿ | | | | | |
| 42. | ಬಿ.ಟೆಕ್. | | | | | | |
| 43. | ಎಂ.ಬಿ.ಬಿ.ಎಸ್. | | | | | | |
| 44. | ಬಿ.ಡಿ.ಎಸ್. | | | | | | |
| 45. | ಎಲ್ಲಾ ಪಿ.ಜಿ. ಮೆಡಿಕಲ್/ ಮೆಡಿಕಲ್ ಡಿಪ್ಲೋಮಾ ಕೋರ್ಸುಗಳು | | | | | | |
| 46. | ಬಿ.ವಿ.ಎಸ್.ಸಿ. | ಪಶು ವೈದ್ಯಕೀಯ ಮಹಾ ವಿದ್ಯಾಲಯ ಇವರು ನಿಗಧಿಪಡಿಸಿದ ದರದಂತೆ | | | | | |
| 47. | ಎಂ.ವಿ.ಎಸ್.ಸಿ. | | | | | | |

| ಕ್ರ. ಸಂ. | ಕೋರ್ಸಿನ ಹೆಸರು | ಪರೀಕ್ಷಾ ಶುಲ್ಕ | ಬೋಧನಾ ಶುಲ್ಕ | ಪ್ರಯೋಗಾಲಯ ಶುಲ್ಕ | ಕ್ರೀಡಾ ಶುಲ್ಕ | ಗ್ರಂಥಾಲಯ ಶುಲ್ಕ | ಒಟ್ಟು |
|---|---|---|---|---|---|---|---|
| 48. | ಪಿ.ಯು.ಸಿ. | ಪದವಿ ಪೂರ್ವ ಶಿಕ್ಷಣ ಮಂಡಳಿ ನಿಗದಿಪಡಿಸಿದ ದರದಂತೆ | | | | | |
| 49. | ಎಸ್.ಎಸ್.ಎಲ್.ಸಿ. | 2012ನೇ ಸಾಲಿಗೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಿಗದಿಪಡಿಸಿದ ದರದಂತೆ (ರೂ. 345/–) | | | | | |
| 50. | ಎಂ.ಫಾರ್ಮ | ವೈದ್ಯಕೀಯ ಶಿಕ್ಷಣ ಇಲಾಖೆ | | | | | |
| 51. | ಡಿ.ಫಾರ್ಮ | | | | | | |
| 52. | ಎಂ.ಡಿ.ಎಸ್. | | | | | | |
| 53. | ಡಿಪ್ಲೋಮಾ | ತಾಂತ್ರಿಕ ಶಿಕ್ಷಣ ಇಲಾಖೆಯು ನಿಗಧಿಪಡಿಸಿದ ದರಗಳಂತೆ | | | | | |

- 2012–13ನೇ ಸಾಲಿಗೆ ಈ ಮೇಲಿನಂತೆ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಮತ್ತು ಗ್ರಂಥಾಲಯ ಶುಲ್ಕಕ್ಕೆ ನಿಗಧಿಪಡಿಸಿರುವ ದರ ಅಥವಾ ಆಯಾ ವಿಶ್ವವಿದ್ಯಾನಿಲಯ/ಇಲಾಖೆ ನಿಗಧಿಪಡಿಸಿರುವ ದರ, ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಮಾತ್ರ ಗಣನೆಗೆ ತೆಗೆದುಕೊಳ್ಳತಕ್ಕದ್ದು.
- ವಿಶ್ವವಿದ್ಯಾನಿಲಯ/ಶಿಕ್ಷಣ ಸಂಸ್ಥೆಗಳು 2012–13ನೇ ಸಾಲಿಗೆ ನಿಗಧಿಪಡಿಸಿರುವ ಶುಲ್ಕಗಳ ದರಗಳಲ್ಲಿ ಮುಂದಿನ ಮೂರು ವರ್ಷಗಳವರೆಗೆ ಯಾವುದೇ ಮಾರ್ಪಾಡು ಮಾಡಲು ಅವಕಾಶವಿರುವುದಿಲ್ಲ.

**ಎಂ.ಜಿ. ಮುಳಕೂರ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 168**

## ಒಳಾಡಳಿತ ಸಚಿವಾಲಯ

**ವಿಷಯ :** 2012–13ನೇ ಸಾಲಿನ ವಿವಿಧ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಗೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ : ಒಇ 120 ಕಸೈಸೇ 99, ದಿನಾಂಕ : 1–7–2002.
2. ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರ ಪತ್ರ ಸಂ. ಸೈಕಪುಇ/ಕಲ್ಯಾಣ/ಫ್ರೀ.ಟ್ರೇ/2012, ದಿನಾಂಕ : 7–6–2012 ಮತ್ತು ದಿನಾಂಕ : 9–11–2012.
3. ಸರ್ಕಾರದ ಆದೇಶ ಸಂ. ಆಇ 165 ಬಿಆರ್‌ಎಸ್ 2012, ದಿನಾಂಕ : 11–1–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ರಾಜ್ಯದಿಂದ ಪ್ರಾದೇಶಿಕ ಸೇನಾ ಪಡೆಗೆ ಭರ್ತಿಯಾಗುವ ಸಿಬ್ಬಂದಿಯವರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಪ್ರೋತ್ಸಾಹ ಅನುದಾನ ಟಿ.ಎ. ಡೆಕೋರೇಷನ್ (ಆಫೀಸರ್ಸ್‌ಗೆ) ರೂ. 3,000 ರಿಂದ ರೂ. 5,000 ಗಳಿಗೆ ಮತ್ತು ಟಿ.ಎ. ಮೆಡಲ್ಸ್ (ಜೆ.ಸಿ.ಓಗಳು ಮತ್ತು ಇತರ ರ್‍ಯಾಂಕ್‌ಗಳವರಿಗೆ) ರೂ. 2,000 ರಿಂದ ರೂ. 3,000 ಗಳಿಗೆ ಪ್ರೋತ್ಸಾಹ ಧನವನ್ನು ಹೆಚ್ಚಿಸಿ, ಸದರಿ ಅನುದಾನವನ್ನು ಲೆಕ್ಕ ಶೀರ್ಷಿಕೆ 2075–00–104–0–05–(015) ರಡಿ ಭರಿಸುವಂತೆ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 2012–13ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2235–60–200–1–01–(051) ರಡಿ ಸಾಮಾನ್ಯ ವೆಚ್ಚಕ್ಕಾಗಿ ರೂ. 3.00 ಲಕ್ಷ ಮತ್ತು ಸೇನಾ ರ್‍ಯಾಲಿ ಪೂರ್ವ ಅಭ್ಯರ್ಥಿಗಳಿಗೆ ತರಬೇತಿಗಾಗಿ ರೂ. 90.00 ಲಕ್ಷ ಮತ್ತು ಟಿ.ಎ. ಡೆಕೋರೇಷನ್ (ಆಫೀಸರ್ಸ್‌ಗೆ) ಮತ್ತು ಟಿ.ಎ. ಮೆಡಲ್ಸ್ (ಜೆ.ಸಿ.ಓ.ಗಳು ಮತ್ತು ಇತರ ರ್‍ಯಾಂಕ್‌ಗಳವರಿಗೆ) ಪ್ರೋತ್ಸಾಹ ಧನ ನೀಡಲು 2010–11, 2011–12 ಹಾಗೂ 2012–13ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2075–00–104–0–05–(015) ರಡಿ ಅನುದಾನ ಬಿಡುಗಡೆಯಾಗದಿರುವುದಕ್ಕೆ 2010–11ನೇ ಸಾಲಿನಿಂದ ಬಾಕಿ ಇರುವ ಫಲಾನುಭವಿಗಳಿಗೆ ಪ್ರೋತ್ಸಾಹ ಧನ ನೀಡಲು 2012–13ನೇ ಸಾಲಿನಲ್ಲಿ ರೂ. 4.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (3)ರ ಆದೇಶದಲ್ಲಿ 2012–13ನೇ ಸಾಲಿನ ಆಯವ್ಯಯಕ್ಕಾಗಿ ಲೆಕ್ಕ ಶೀರ್ಷಿಕೆ 2235–60–200–1–01–(051) ಯೋಜನೇತರಡಿ ಸೇನಾ ರ್‍ಯಾಲಿ ಪೂರ್ವ ಅಭ್ಯರ್ಥಿಗಳಿಗೆ ತರಬೇತಿಗಾಗಿ ರೂ. 18.00 ಲಕ್ಷವನ್ನು ಹೆಚ್ಚುವರಿಯಾಗಿ ಒದಗಿಸಲಾಗಿದೆ.

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 85 ಕಸೈಸೇ 2012, ಬೆಂಗಳೂರು, ದಿನಾಂಕ : 24–1–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2012–13ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2235–60–200–1–01–(051) ಯೋಜನೇತರಡಿ ಒಟ್ಟು ರೂ. 18.00 ಲಕ್ಷ (ರೂ. ಹದಿನೆಂಟು ಲಕ್ಷ) ಗಳನ್ನು (ಸೇನಾ ರ್‍ಯಾಲಿ ಪೂರ್ವ ಅಭ್ಯರ್ಥಿಗಳಿಗೆ ತರಬೇತಿಗಾಗಿ ಮತ್ತು ಸಾಮಾನ್ಯ ವೆಚ್ಚಕ್ಕಾಗಿ ರೂ. 15.00+ರೂ. 3.00 ಲಕ್ಷ)ಹಾಗೂ ಟಿ.ಎ. ಕ್ಯಾಷ್ ಅವಾರ್ಡ್‌ನ್ನು ಸಿಬ್ಬಂದಿಗಳಿಗೆ ನೀಡಲು ಲೆಕ್ಕ ಶೀರ್ಷಿಕೆ 2075–00–104–0–05–(015) ರಡಿ ರೂ. 4.00 ಲಕ್ಷಗಳನ್ನು (ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಹೆಚ್ಚುವರಿಯಾಗಿ ಒದಗಿಸಿ ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. : ಆಇ 416 ವೆಚ್ಚ–11/2012, ದಿನಾಂಕ : 9–1–2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು).

**P.R. 196**

## ಜಲಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ಸನೀಇ 19 ಸೇಸಎ 2012, ಬೆಂಗಳೂರು, ದಿನಾಂಕ : 11–1–2013

ಸರ್ಕಾರದ ಆದೇಶ ಸಂಖ್ಯೆ : ಸನೀಇ 19 ಸೇಸಎ 2012, ದಿನಾಂಕ : 10–1–2013ಕ್ಕೆ ಲಗತ್ತಿಸಲಾದ ಅನುಬಂಧವನ್ನು ಹಿಂಪಡೆದು, ಈ ಕೆಳಗೆ ನಮೂದಿಸಿರುವ ಅನುಬಂಧವನ್ನು ಸೇರಿಸಿ ಓದಿಕೊಳ್ಳತಕ್ಕದ್ದು. ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

| Sl. No. | Name of the Post | Post to be Shifted from C.E. MI(S) Bangalore | Posts to be shifted from Bangalore & Mysore Circle Offices | Posts to be shifted from Tumkur Division | Actual Posts that can be created in Sira Sub-division | Total Posts (3+4+5+6) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Asst. Exe Engineer | 1 | 0 | 0 | 0 | 1 |
| 2. | Asst. Engineer | 0 | 2 | 0 | 2 | 4 |
| 3. | Junior Engineer | 0 | 0 | 1 | 2 | 3 |
| 4. | FDA | 0 | 0 | 1 | 0 | 1 |
| 5. | SDA | 0 | 0 | 1 | 1 | 2 |
| 6. | Typist | 1 | 0 | 0 | 0 | 1 |
| 7. | First Division Land Surveyor | 0 | 0 | 0 | Presently not required | 0 |
| 8. | Driver | 0 | 0 | 0 | 1 | 1 |
| 9. | Peon | 0 | 0 | 1 | 1 | 2 |
| 10. | Watchman | 0 | 0 | 0 | Presently not required | 0 |
| | Total | 2 | 2 | 4 | 7 | 15 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 197**

## PERSONNEL AND ADMINISTRATIVE REFORMS SECRETARIAT

**SUB :** Declaration of equivalence of the posts under Rule 11 of IFS (Pay) Rules, 2007.

**READ :** Government Notification No. DPAR 09 SFP 2013, dated : 30-1-2013

### GOVERNMENT ORDER NO. DPAR 09 SFP 2013, BANGALORE, DATED : 24-12-2012.

Government declare under rule 11 of IFS (Pay) Rules, 2007, that the post of **Administrator, Bhadra Command Area Development Authority, Shimoga** is equivalent in status and responsibilities to the IFS cadre post of Chief Conservator of Forests, Shimoga Circle, Shimoga as included in Schedule-II-A to the said rules.

By Order and in the name of the Governor of Karnataka,
**G.R. NAGARAJA**
Under Secretary to Government,
DP & AR (Services-V).

**P.R. 198**

## PERSONNEL AND ADMINISTRATIVE REFORMS SECRETARIAT

**SUB :** Declaration of equivalence of the posts under Rule 11 of IFS (Pay) Rules, 2007.

**READ :** Government Notification No. DPAR 170 SFP 2012, dated : 7-1-2013

### GOVERNMENT ORDER NO. DPAR 17 SFP 2013, BANGALORE, DATED : 7-1-2013.

Government declar under rule 11 of IFS (Pay) Rules, 2007, that the ex-cadre post of **Diector (Information Technology), Bangalore Metropolitan Transport Corporation, Bangalore** is equivalent in status and responsibilities to the IFS cadre post of **Chief Conservator of Forests, (Legal Cell), Bangalore.** as included in Schedule-II-A to the said rules.

By Order and in the name of the Governor of Karnataka,

**G.R. NAGARAJA**

Under Secretary to Government,

DP & AR (Services-V).

**P.R. 200**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಕೆ.ಡಿ.ಪಿ. ಸಮಿತಿಗೆ ಸದಸ್ಯರನ್ನು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** ಶ್ರೀ ನಿರ್ಮಲ್ ಕುಮಾರ್ ಸುರಾಣ ಭಾರತೀಯ ಜನತಾ ಪಾರ್ಟಿ, ಕರ್ನಾಟಕ ಇವರ ಪತ್ರದ ಸಂಖ್ಯೆ: ರಾಕಾ/ನಾನಿ/340/2012, ದಿನಾಂಕ : 16-5-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (1)ರ ಪತ್ರದಲ್ಲಿ ರಾಜ್ಯ ಉಪಾಧ್ಯಕ್ಷರು ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಶಿಫಾರಸ್ಸು ಮೇರೆಗೆ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಕೆ.ಡಿ.ಪಿ. ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ : ಯೋಇ 109 ಯೋವಿವಿ 2009, ಬೆಂಗಳೂರು, ದಿನಾಂಕ : 21-9-2012.

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಕೆ.ಡಿ.ಪಿ. ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಕೆಳಕಂಡ ಆರು (6) ಜನರನ್ನು ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಕೆ.ಡಿ.ಪಿ.ಗೆ**

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀ ಮುನಿಯಪ್ಪ ಹೆಚ್. ಬಿನ್ ಹನುಮಂತಪ್ಪ, ಚೌಳೂರು ಅಂಚೆ, ಚಳ್ಳಕೆರೆ ತಾಲ್ಲೂಕು | ಸಾಮಾನ್ಯ |
| 2. | ಶ್ರೀ ಮಂಜುನಾಥರೆಡ್ಡಿ ಬಿನ್ ಕೆ.ಪಿ. ರಾಮರೆಡ್ಡಿ, ಕುರಡಿಹಳ್ಳಿ ಅಂಚೆ, ಚಳ್ಳಕೆರೆ ತಾಲ್ಲೂಕು | ಸಾಮಾನ್ಯ |
| 3. | ಶ್ರೀ ಆರ್. ಜಯರಾಮಪ್ಪ ಬಿನ್ ರಾಮಪ್ಪ, ವೀರಾಸಾಬಿನಹಳ್ಳಿ ಅಂಚೆ, ಚಳ್ಳಕೆರೆ ತಾಲ್ಲೂಕು | ಹಿಂ. ವರ್ಗ |
| 4. | ಶ್ರೀ ಹುಸೇನ್ ಸಾಬ್ ಬಿನ್ ಇಮಾಮ್ ಸಾಬ್, ಸಿದ್ದೇಶ್ವರನದುರ್ಗ ಅಂಚೆ, ಚಳ್ಳಕೆರೆ ತಾಲ್ಲೂಕು | ಅಲ್ಪಸಂಖ್ಯಾತ |
| 5. | ಶ್ರೀಮತಿ ಎಂ.ಆರ್. ಶೋಭ ಮುರಳಿಕೃಷ್ಣ, ಪರಶುರಾಂಪುರ ಅಂಚೆ, ಚಳ್ಳಕೆರೆ ತಾಲ್ಲೂಕು | ಮಹಿಳೆ |
| 6. | ಶ್ರೀ ಕೆ. ಕರಿಯಣ್ಣ ಬಿನ್ ಕರಿಯಣ್ಣ, ಟಿ.ಎನ್. ಕೋಟೆ ಅಂಚೆ, ಚಳ್ಳಕೆರೆ ತಾಲ್ಲೂಕು | ಎಸ್.ಟಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 201**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ. ಸಂಕಇ 12 ಕೆಎಂಯು 2004, ದಿನಾಂಕ : 25–3–2004.
2. ಸರ್ಕಾರಿ ಆದೇಶ ಸಂ. ಕಸಂವಾಪ್ರ 10 ಕೆಎಂಯು 2012, ದಿನಾಂಕ : 23–2–2012.
3. ಅಧಿಕೃತ ಜ್ಞಾಪನ ಸಂ. ಸಿಆಸುಇ 34 ಸೇನಿಇ 96, ದಿನಾಂಕ : 1–8–1996
4. ಪತ್ರ ಸಂ. ಆಪ್ರಾಸಂಪ/ವೃ&ನೇ/2012–13, ದಿನಾಂಕ : 28–6–2012.

**ಪ್ರಸ್ತಾವನೆ :**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಭಾರತೀಯ ಆಡಳಿತ ಸೇವೆಯ ಸೂಪರ್ ಟೈಮ್ ವೇತನ ಶ್ರೇಣಿಯ (ರೂ. 18,400–500–22,400) ಆಯುಕ್ತರು ಒಂದು ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿದೆ ಹಾಗೂ ಈ ಹುದ್ದೆಯನ್ನು ತದನಂತರ ಕಾಲಕಾಲಕ್ಕೆ ಮುಂದುವರಿಸಲಾಗಿದೆ.

ಪ್ರಾಚ್ಯವಸ್ತು ಸಂಗ್ರಹಾಲಯಗಳ ಇಲಾಖೆ ಹಾಗೂ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯನ್ನು ಸಮಾಗಮಗೊಳಿಸಿ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಎಂದು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪುನರ್ ರಚಿಸಲಾಗಿದೆ. ಇಲಾಖೆಯ ಮುಖ್ಯಸ್ಥರಾಗಿ ಆಯುಕ್ತರು ಕರ್ತವ್ಯ ನಿರ್ವಹಿಸುವಂತೆ ಆದೇಶಿಸಲಾಗಿದೆ.

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಆಯುಕ್ತರ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗಧಿಪಡಿಸಿರುವುದಿಲ್ಲ. ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನೇಮಕಾತಿ ವಿಧಾನವನ್ನು ನಿಗಧಿಪಡಿಸದ ಹುದ್ದೆಗಳಿಗೆ ಒಂದು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಲು ಮೇಲೆ (3) ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಆಸ್ಪದವನ್ನು ಕಲ್ಪಿಸಲಾಗಿದೆ. ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯ ಆಯುಕ್ತರ ಹುದ್ದೆಯನ್ನು ತುಂಬಲು ನೇಮಕಾತಿ ವಿಧಾನವನ್ನು ರೂಪಿಸುವಂತೆ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 163 ಕೆಎಂಯು 2012, ಬೆಂಗಳೂರು, ದಿನಾಂಕ : 18–8–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಸೃಜಿಸಲಾಗಿರುವ ಆಯುಕ್ತರ ಹುದ್ದೆಗೆ ದಿನಾಂಕ : 1–8–1996ರ ಅಧಿಕೃತ ಜ್ಞಾಪನದನ್ವಯ ಹಾಗೂ ಅದರಲ್ಲಿ ನಿಗಧಿಪಡಿಸಿರುವ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಈ ಕೆಳಕಂಡಂತೆ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗಧಿಪಡಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಆಯುಕ್ತರು | 01 | ಅಖಿಲ ಭಾರತ ಸೇವೆಗೆ ಸೇರಿದ ಅಧಿಕಾರಿಗಳನ್ನು ಪ್ರತಿ ನಿಯೋಜಿಸುವ ಮೂಲಕ ಅಥವಾ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಸೀನಿಯರ್ ಸೂಪರ್ ಟೈಮ್ ಸ್ಕೇಲ್ ಅಥವಾ ಸೂಪರ್ ಟೈಮ್ ಸ್ಕೇಲ್ ಅಧಿಕಾರಿಯನ್ನು ನಿಯೋಜಿಸುವ ಮೂಲಕ. |

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಮೇಲ್ಕಂಡಂತೆ ನೇಮಕಾತಿ ವಿಧಾನವನ್ನು ತ್ವರಿತವಾಗಿ ಅಳವಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ. ಸಿಆಸುಇ 361 ಸೆಅಸೆ 2012, ದಿನಾಂಕ: 23–7–2012 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

PR. 202

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ತಿದ್ದೋಲೆ

**ಸಂಖ್ಯೆ : ಕಸಂವಾಪ್ರ 102 ಕೆಎಂಯು 2009, ಬೆಂಗಳೂರು, ದಿನಾಂಕ : 21–8–2012.**

ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 102 ಕೆಎಂಯು 2009, ದಿನಾಂಕ : 28–7–2012ರ ಆದೇಶದ ಭಾಗದ ಕ್ರಮ ಸಂಖ್ಯೆ 2ರಲ್ಲಿನ ಸದಸ್ಯತ್ವವನ್ನು ರದ್ದುಗೊಳಿಸಿ ಕ್ರಮ ಸಂಖ್ಯೆ 8ರಲ್ಲಿರುವ **"ಸಹಾಯಕ ನಿರ್ದೇಶಕರು"** ಎಂಬುದರ ಬದಲಾಗಿ **ನಿರ್ದೇಶಕರು (ಪ್ರಾಚ್ಯವಸ್ತು)** ಎಂದು ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ).

P.R. 203

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯ ಸದಸ್ಯರನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ. ಸಂಕಇ 201 ಕೆಎಂಯು 2002, ದಿನಾಂಕ : 22–5–2002.
2. ಸರ್ಕಾರಿ ಆದೇಶ ಸಂ. ಸಂಕಇ 201 ಕೆಎಂಯು 2002, ದಿನಾಂಕ : 26–6–2002
3. ಸರ್ಕಾರಿ ಆದೇಶ ಸಂ. ಕಸಂವಾಪ್ರ 134 ಕೆಎಂಯು 2009, ದಿನಾಂಕ : 14–10–2009.
4. ಪತ್ರ ಸಂ. ಆಪ್ರಾಸಂಪ/ಎ.ಸಿ.ಟಿ.6/20/2012–13, ದಿನಾಂಕ : 26–5–2012.

**ಪ್ರಸ್ತಾವನೆ :**

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವತಿಯಿಂದ ಕೈಗೊಳ್ಳಲಾಗುವ ಸಂರಕ್ಷಣಾ ಕಾಮಗಾರಿಗಳ ಅಂದಾಜು ಮೊತ್ತವು ರೂ. 5.00 ಲಕ್ಷ ಮೀರಿದಲ್ಲಿ ಅಂತಹ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ ನೀಡುವ ಬಗ್ಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ತಾಂತ್ರಿಕ ಸಮಿತಿಯನ್ನು ನೇಮಿಸಲಾಗಿದೆ.

ಸದರಿ ಸಮಿತಿಗೆ ಮೂರು ಜನ ಅಧಿಕಾರೇತರ ತಾಂತ್ರಿಕ ಸದಸ್ಯರನ್ನು ಮೂರು ವರ್ಷದವಧಿಗೆ ಅಥವಾ ಮುಂದಿನ ಆದೇಶದವರೆಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿದೆ.

ಸದರಿ ಸಮಿತಿಯ ಕಾಲಾವಧಿಯನ್ನು ಕಾಲಕಾಲಕ್ಕೆ ಮುಂದುವರೆಸುತ್ತಾ ಬಂದಿದ್ದು, ಮೇಲೆ ಓದಲಾದ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ : 7–2–2012 ರವರೆಗೆ ಮುಂದುವರಿಸಿ ಆದೇಶಿಸಿದೆ.

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯ ಅಧಿಕಾರೇತರ ಸದಸ್ಯರ ಅವಧಿಯು 7–2–2012ಕ್ಕೆ ಮುಕ್ತಾಯಗೊಂಡಿರುತ್ತದೆ. ಇಲಾಖೆಯ ಸಂರಕ್ಷಣಾ ಕಾಮಗಾರಿಗಳ ಅಂದಾಜುಪಟ್ಟಿ ಪರಿಶೀಲಿಸಿ ಸಲಹೆ ಮತ್ತು ಮಾರ್ಗದರ್ಶನಗಳನ್ನು ನೀಡಿ ಅಂದಾಜು ಪಟ್ಟಿಗೆ ತಾಂತ್ರಿಕ ಮಂಜೂರಾತಿ ನೀಡುವಲ್ಲಿ ಮತ್ತು ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ವಿವಿಧ ಹಂತಗಳಲ್ಲಿ ತಾಂತ್ರಿಕ ಸಲಹಾ ಸಮಿತಿ ಸದಸ್ಯರ ಸಲಹೆ ಮತ್ತು ಮಾರ್ಗದರ್ಶನವು ಇಲಾಖೆಗೆ ಅವಶ್ಯಕತೆಯಿರುವುದರಿಂದ ಈ ಕೆಳಕಂಡ ಮೂವರು ಸಮಿತಿ ಸದಸ್ಯರನ್ನು ದಿನಾಂಕ: 8–2–2012 ರಿಂದ 7–2–2015 ರವರೆಗೆ ಒಟ್ಟು ಮೂರು ವರ್ಷಗಳ ಅವಧಿಗೆ ಮುಂದುವರೆಸಿ ಸರ್ಕಾರಿ ಆದೇಶ ಹೊರಡಿಸಬೇಕೆಂದು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆರವರು ಕೋರಿರುತ್ತಾರೆ :–

1. ಶ್ರೀ ಜಿ. ಅಶ್ವತ್ಥ ನಾರಾಯಣ, ನಿವೃತ್ತ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ
2. ಶ್ರೀ ಎಂ. ರಾಯಚೂರು, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ
3. ಶ್ರೀ ಸಿ.ಬಿ. ಪಾಟೀಲ್, ನಿವೃತ್ತ ಉಪ ಅಧೀಕ್ಷಕ ಪುರಾತತ್ವಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 147 ಕೆಎಂಯು 2012, ಬೆಂಗಳೂರು, ದಿನಾಂಕ : 31–8–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಈ ಕೆಳಕಂಡ ತಾಂತ್ರಿಕ ಸಲಹಾ ಸಮಿತಿಯ ಅಧಿಕಾರೇತರ ಸದಸ್ಯರ ಅವಧಿಯನ್ನು ದಿನಾಂಕ : 8–2–2012 ರಿಂದ 31–3–2013 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶಿಸಿದೆ:–

1. ಶ್ರೀ ಜಿ. ಅಶ್ವತ್ಥ ನಾರಾಯಣ, ನಿವೃತ್ತ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ
2. ಶ್ರೀ ಎಂ. ರಾಯಚೂರು, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ
3. ಶ್ರೀ ಸಿ.ಬಿ. ಪಾಟೀಲ್, ನಿವೃತ್ತ ಉಪ ಅಧೀಕ್ಷಕ ಪುರಾತತ್ವಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ).

P.R. 204

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಪರಂಪರಾ ಸ್ಥಳಗಳು ಹಾಗೂ ಸ್ಮಾರಕಗಳ ರಕ್ಷಣೆ, ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಭಾರತ ಸರ್ಕಾರ, ಸಂಸ್ಕೃತಿ ಮಂತ್ರಾಲಯದ ಕಾರ್ಯದರ್ಶಿಯವರ ಅ.ಸ. ಪತ್ರ ಸಂಖ್ಯೆ : 25/90/2010–11, ಎಂ.ಓ.ಎನ್. ದಿನಾಂಕ : 2–5–2011.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿನ ಪರಂಪರಾ ಸ್ಥಳಗಳು ಹಾಗೂ ಸ್ಮಾರಕಗಳ ರಕ್ಷಣೆ, ಸಂರಕ್ಷಣೆ ಹಾಗೂ ಅಭಿವೃದ್ಧಿ ಕಾರ್ಯವು ಭಾರತೀಯ ಸರ್ವೇಕ್ಷಣಾ ಇಲಾಖೆ ಮತ್ತು ರಾಜ್ಯ ಸರ್ಕಾರಕ್ಕೆ ಸಂಬಂಧಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಸ್ಮಾರಕ ಮತ್ತು ಪುರಾತತ್ವ ಸ್ಥಳಗಳ ಮತ್ತು ಅವಶೇಷಗಳ (ತಿದ್ದುಪಡಿ

ಮತ್ತು ಮಾನ್ಯೀಕರಣ) ಅಧಿನಿಯಮ 2010ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಭಾರತೀಯ ಸರ್ವೇಕ್ಷಣಾ ಇಲಾಖೆ ಮತ್ತು ರಾಜ್ಯ ಸರ್ಕಾರದ ಸಕ್ಷಮಪ್ರಾಧಿಕಾರಗಳಲ್ಲಿ ಸಮನ್ವಯದ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಪರಂಪರಾ ಸ್ಥಳಗಳು ಹಾಗೂ ಸ್ಮಾರಕಗಳ ರಕ್ಷಣೆ, ಸಂರಕ್ಷಣೆ ಹಾಗೂ ಅಭಿವೃದ್ಧಿಯ ವಿಷಯದ ಬಗ್ಗೆ ಚರ್ಚಿಸಿ ಸೂಕ್ತ ನಿರ್ಣಯ ತೆಗೆದುಕೊಳ್ಳಲು ರಾಜ್ಯ ಮಟ್ಟದ ಸಮನ್ವಯ ಸಮಿತಿಯೊಂದನ್ನು ರಚಿಸುವಂತೆ ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಕಾರ್ಯದರ್ಶಿ, ಭಾರತ ಸರ್ಕಾರ, ಸಂಸ್ಕೃತಿ ಮಂತ್ರಾಲಯ, ನವದೆಹಲಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 120 ಕೆಎಂಯು 2011, ಬೆಂಗಳೂರು, ದಿನಾಂಕ : 26–12–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕದ ಪರಂಪರಾ ಸ್ಥಳಗಳು ಹಾಗೂ ಸ್ಮಾರಕಗಳ ರಕ್ಷಣೆ, ಸಂರಕ್ಷಣೆ ಹಾಗೂ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಚರ್ಚಿಸಿ ಸೂಕ್ತ ನಿರ್ಣಯ ತೆಗೆದುಕೊಳ್ಳುವ ಸಲುವಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| ಕ್ರ ಸಂ. | **ಹೆಸರು/ವಿಳಾಸ** | |
|---|---|---|
| 1. | ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಅಥವಾ ಅವರ ಪ್ರತಿನಿಧಿ (ಜಂಟಿ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ) | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ ಅಥವಾ ಅವರ ಪ್ರತಿನಿಧಿ (ಜಂಟಿ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ) | ಸದಸ್ಯರು |
| 5. | ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು | ಸದಸ್ಯರು |
| 6. | ನಿರ್ದೇಶಕರು (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 7. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ವಕ್ಫ್ ಮಂಡಳಿ ಬೆಂಗಳೂರು | ಸದಸ್ಯರು |
| 8. | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ | ಸದಸ್ಯರು |
| 9. | ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು | ಸದಸ್ಯರು |
| 10. | ಪ್ರಾದೇಶಿಕ ನಿರ್ದೇಶಕರು, ಭಾರತೀಯ ಸರ್ವೇಕ್ಷಣಾಲಯ ಇಲಾಖೆ | ಸದಸ್ಯರು |
| 11. | ಪುರಾತತ್ವ ಅಧೀಕ್ಷಕರು, ಭಾರತೀಯ ಸರ್ವೇಕ್ಷಣಾ ಇಲಾಖೆ, ಬೆಂಗಳೂರು ವಲಯ/ ಧಾರವಾಡ ವಲಯ | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಈ ಕೆಳಕಂಡ ಅಂಶಗಳ ಬಗ್ಗೆ ಸೂಕ್ತ ನಿರ್ಣಯ ತೆಗೆದುಕೊಳ್ಳುವುದು.

1. ಕರ್ನಾಟಕ ರಾಜ್ಯದಲ್ಲಿನ ಪರಂಪರಾ ಸ್ಥಳಗಳು ಹಾಗೂ ಸ್ಮಾರಕಗಳ ರಕ್ಷಣೆ, ಸಂರಕ್ಷಣೆ ಹಾಗೂ ಇಂತಹ ಸ್ಥಳಗಳಲ್ಲಿ ನೈಸರ್ಗಿಕ ಅಭಿವೃದ್ಧಿ ಕಾರ್ಯಗಳ ಬಗ್ಗೆ.
2. ಪ್ರಾಚೀನ ಸ್ಮಾರಕ ಮತ್ತು ಪುರಾತತ್ವ ಸ್ಥಳಗಳ ಮತ್ತು ಅವಶೇಷಗಳ (ತಿದ್ದುಪಡಿ ಮತ್ತು ಮಾನ್ಯೀಕರಣ) ಅಧಿನಿಯಮ 2010 ರಡಿಯಲ್ಲಿನ ನಿಯಮಗಳನ್ನು ಉಲ್ಲಂಘಿಸಿ, ಅನಧಿಕೃತ ಒತ್ತುವರಿ ಮತ್ತು ಅನಧಿಕೃತ ನಿರ್ಮಾಣ ಕಾರ್ಯ ನಡೆಯದಂತೆ ನಿರ್ಬಂಧಿಸುವುದು/ ತಡೆಗಟ್ಟುವುದು. ಸದರಿ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಭಾರತೀಯ ಸರ್ವೇಕ್ಷಣಾ ಇಲಾಖೆ ಮತ್ತು ರಾಜ್ಯ ಸರ್ಕಾರದ ಸಕ್ಷಮಪ್ರಾಧಿಕಾರಗಳಲ್ಲಿ ಸಮನ್ವಯ ಸಾಧಿಸುವುದು. ಹೊಸ ಅನ್ವೇಷಣೆಯ ಸ್ಥಳಗಳನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕರಣಗಳ ಬಗ್ಗೆ.
3. ಉತ್ಖನನ ಮತ್ತು ಅನ್ವೇಷಣೆ ಕುರಿತಂತೆ ಭಾರತೀಯ ಸರ್ವೇಕ್ಷಣಾ ಇಲಾಖೆ ಮತ್ತು ರಾಜ್ಯ ಸರ್ಕಾರದ ಸಕ್ಷಮಪ್ರಾಧಿಕಾರಗಳಲ್ಲಿ ಸಮನ್ವಯತೆ ಬಗ್ಗೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ).

P.R. 205

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ : ಕಸಂವಾಪ್ರ 120 ಕೆಎಂಯು 2011, ದಿನಾಂಕ : 4-1-2013.**

ದಿನಾಂಕ : 26-12-2012ರ ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 120 ಕೆಎಂಯು 2011ರ ಆದೇಶದಲ್ಲಿ ರಚಿಸಿರುವ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಕ್ರ.ಸಂ. 4 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ ಅಥವಾ ಅವರ ಪ್ರತಿನಿಧಿ (ಜಂಟಿ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ) ಎಂಬುದಕ್ಕೆ ಬದಲಾಗಿ, ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಎಂದು ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ).

**P.R. 206**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಪಲ್ಪ್‌ವುಡ್ ವಿಂಗ್‌ನಲ್ಲಿ 2013ನೇ ಮಳೆಗಾಲಕ್ಕೆ ಪಲ್ಪ್‌ವುಡ್ ನೆಡುತೋಪುಗಳ ನಿರ್ಮಾಣಕ್ಕಾಗಿ ತಯಾರಿಸಿರುವ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ಕುರಿತು.

**ಓದಲಾಗಿದೆ :**

1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಅನಿನಿ/ಎ3/ಪ.ವು.ಪ್ರಾ/2013/2012-13/1514, ದಿನಾಂಕ : 30-7-2012.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಅನಿನಿ/ಎ3/ಪ.ವು.ಪ್ರಾ/2013/2012-13/1254, ದಿನಾಂಕ : 18-10-2012.

ಮೇಲೆ (1)ರಲ್ಲಿ ಓದಲಾದ ದಿನಾಂಕ : 30-7-2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು, ಇವರು ನಿಗಮವು ಪಲ್ಪ್‌ವುಡ್ ಘಟಕದಲ್ಲಿ ಈಗ ಒಟ್ಟು 51758.39 ಹೆ.ಕ್ಷೇತ್ರದಷ್ಟು ಅರಣ್ಯ ನೆಡುತೋಪುಗಳನ್ನು ಹೊಂದಿದ್ದು. ಈ ಪೈಕಿ ಇತ್ತೀಚಿನ ದಿನಗಳಲ್ಲಿ ನಿಗಮದ ಮಂಡಳಿಯ ಹಲವು ಸಭೆಗಳಲ್ಲಿ ಕೈಗೊಂಡಿರುವಂತಹ ತೀರ್ಮಾನದಂತೆ ಹೆಚ್ಚು ಅರಣ್ಯ ಬೆಳವಣಿಗೆ ಇರುವ ಹಾಗೂ ಮೂರು ಬಾರಿ ಕಡಿತಲೆಯಾಗಿರುವಂತಹ ಒಟ್ಟು 35000 ಹೆ. ನಷ್ಟು ಅರಣ್ಯ ನೆಡುತೋಪುಗಳನ್ನು ನಿಗಮದ ವತಿಯಿಂದ ಅರಣ್ಯ ಇಲಾಖೆಗೆ ಹಿಂತಿರುಗಿಸುವುದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆಯೆಂದು ತಿಳಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ : ಅಪಜೀ 29 ಎಫ್‌ಎಪಿ 2011, ದಿನಾಂಕ : 19-3-2011 ಮತ್ತು ಸುತ್ತೋಲೆ ಸಂಖ್ಯೆ : ಅಪಜೀ 31 ಎಫ್‌ಎಪಿ 2011, ದಿನಾಂಕ : 18-5-2011ಗಳಲ್ಲಿನ ನಿರ್ಬಂಧನೆ ಹಾಗೂ ಮಾರ್ಗಸೂಚಿಗಳನ್ವಯ ಹಾಗೂ ಮಾಧ್ಯಮದಲ್ಲಿ ನೀಲಗಿರಿ ಮತ್ತು ಅಕೇಶಿಯಾ ನೆಡುತೋಪುಗಳನ್ನು ನಿಗಮವು ಬೆಳೆಸಲು ಅವಕಾಶವಿಲ್ಲವೆಂದು ಪ್ರತಿಭಟನೆ ಆಗುವಂತಹ ಸಂಶಯದಿಂದ 2012ನೇ ಸಾಲಿನಲ್ಲಿ ಯಾವುದೇ ತರಹದ ನೆಡುತೋಪು ನಿರ್ಮಾಣದ ಕೆಲಸ ಕೈಗೊಳ್ಳುವುದನ್ನು ಸ್ಥಗಿತಗೊಳಿಸಲಾಯಿತೆಂದು ತಿಳಿಸಿ ನಿಗಮವು ಪಲ್ಪ್‌ವುಡ್ ಶಾಖೆಯಲ್ಲಿರುವ ಸಿಬ್ಬಂದಿಗಳಿಗಾಗಿ ಪ್ರತಿ ವರ್ಷ ಸುಮಾರು ರೂ. 10.00 ಕೋಟಿಯಷ್ಟು ಸಂಬಳ ಸಾರಿಗೆ ಮತ್ತು ಇತರೆ ವೆಚ್ಚಗಳಿಗಾಗಿ ವೆಚ್ಚ ಮಾಡುತ್ತಲಿದ್ದು, ನೆಡುತೋಪು ನಿರ್ಮಾಣದ ಕೆಲಸಗಳನ್ನು ಈಗ ಸ್ಥಗಿತಗೊಳಿಸಿದಲ್ಲಿ ಮುಂದಿನ ಏಳು ವರ್ಷಗಳ ನಂತರ ನಿಗಮದ ಆರ್ಥಿಕ ವಹಿವಾಟಿನಲ್ಲಿ ಬಿಕ್ಕಟ್ಟು ಸಂಭವಿಸಿ, ನೌಕರರ ಸಂಬಳ ಸಾರಿಗೆಗೂ ಸಹ ಹಣವಿಲ್ಲದಂತಹ ಪ್ರಸಂಗ ನಿರ್ಮಾಣವಾಗುತ್ತದೆಯೆಂದು ತಿಳಿಸಿರುತ್ತಾರೆ.

ಆದ್ದರಿಂದ ಈಗ ನಿಗಮದಲ್ಲಿ ಉಳಿಸಿಕೊಳ್ಳಲು ನಿರ್ಧರಿಸಿರುವಂತಹ 15000 ಹೆ. ಕ್ಷೇತ್ರಗಳಲ್ಲಿ ಕಟಾವು ಆದಂತೆ ಮರುನಾಟಿಕೆ ಮಾಡುವ ಉದ್ದೇಶದಿಂದ 2013ನೇ ಸಾಲಿನಿಂದ ಪ್ರತಿ ವರ್ಷ ಶೇ. 5 ರಷ್ಟು ಅಂದರೆ ಸುಮಾರು 750 ಹೆ. ಕ್ಷೇತ್ರಗಳಲ್ಲಿ ಪಲ್ಪ್‌ವುಡ್ ಬೆಳೆಸಲು ಕ್ರಮ ಕೈಗೊಳ್ಳಲು ದಿನಾಂಕ : 20-6-2012ರಂದು ನಡೆದ ನಿಗಮದ 237ನೇ ಮಂಡಳಿ ಸಭೆಯಲ್ಲಿ ತೀರ್ಮಾನ ತೆಗೆದುಕೊಳ್ಳಲಾಗಿದೆಯೆಂದು ತಿಳಿಸಿ 2013ನೇ ಸಾಲಿಗೆ 750 ಹೆ. ಕ್ಷೇತ್ರದಲ್ಲಿ ಪಲ್ಪ್‌ವುಡ್ ನೆಡುತೋಪು ನಿರ್ಮಾಣ ಮಾಡಲು ಎರಡು ಪ್ರಾಯೋಜನೆಗಳನ್ನು ಅಂದರೆ ಕೋಲಾರ ವಿಭಾಗ ಹಾಗೂ ಶಿವಮೊಗ್ಗ, ಧಾರವಾಡ ಮತ್ತು ಚಿಕ್ಕಮಗಳೂರು ವಿಭಾಗಗಳಿಗೆಂದು ತಯಾರು ಮಾಡಿ, ಈ ಪ್ರಾಯೋಜನೆಗಳಿಗೆ ನಿಗಮದ ಮಂಡಳಿಯಿಂದ ದಿನಾಂಖ : 20-7-2012ರಂದು ನಡೆದ ತನ್ನ 238ನೇ ಸಭೆಯಲ್ಲಿ ಅನುಮೋದನೆಯನ್ನು ಪಡೆಯಲಾಗಿರುತ್ತದೆಯೆಂದು ತಿಳಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 19-10-2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ಇವರು ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಧಾರವಾಡಗಳಲ್ಲಿ 750 ಹೆ. ಕ್ಷೇತ್ರಗಳಲ್ಲಿ ರೂ. 291.05 ಲಕ್ಷಗಳ ಇನ್ನೊಂದು ಪ್ರಾಯೋಜನೆಗೆ ಸಂಬಂಧಿಸಿದ ಪ್ರಸ್ತಾವನೆಗೆ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿ ಯೋಜನಾ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಪ್ರಾಯೋಜನೆಗೆ ನಿಗಮದ ಮಂಡಳಿಯಿಂದ ದಿನಾಂಕ : 26-9-2012 ರಂದು ನಡೆದ 239ನೇ ಸಭೆಯಲ್ಲಿ ಅನುಮೋದನೆಯನ್ನು ಪಡೆಯಲಾಗಿರುತ್ತದೆಯೆಂದು ತಿಳಿಸಿರುತ್ತಾರೆ.

ಮುಂದುವರೆದು, ನಿಗಮದ ಮಂಡಳಿಯು ಪ್ರಮುಖವಾಗಿ ಚರ್ಚಿಸಿ, ಒಂದು ವೇಳೆ ನಿಗಮವು ಸರ್ಕಾರದ ಸುತ್ತೋಲೆಗಳನ್ನಾಧರಿಸಿ, ಕ್ಷೇತ್ರಗಳನ್ನು ಗುರುತುಪಡಿಸಿ, ಅಂತಹ ಕ್ಷೇತ್ರಗಳಲ್ಲೇ ನೀಲಗಿರಿ ಹಾಗೂ ಅಕೇಶಿಯಾ ನೆಡುತೋಪುಗಳನ್ನು ಬೆಳೆಸಲು ಕ್ರಮ ಕೈಗೊಂಡರೂ ಸಹ, ಸಾರ್ವಜನಿಕವಾಗಿ ಅಥವಾ ಮಾಧ್ಯಮದಲ್ಲಿ ಬಹುಶಃ ಪ್ರತಿಭಟನೆ ವ್ಯಕ್ತವಾಗಬಹುದೆಂಬ ನಿರೀಕ್ಷೆ ಇರುತ್ತದೆಯೆಂದು ಭಾವಿಸಿ ನಿಗಮವು ನೀಲಗಿರಿ ಮತ್ತು ಅಕೇಶಿಯಾ ಬೆಳೆಸುವ ಸಂಬಂಧ ಹೊರಡಿಸಲಾದಂತಹ ನಿರ್ಬಂಧನೆ ಮತ್ತು ಮಾರ್ಗಸೂಚಿಗಳಿಂದ ನಿಗಮಕ್ಕೆ ವಿನಾಯಿತಿ ನೀಡುವುದು ಅಥವಾ ನಿರ್ಬಂಧನೆಗಳನ್ನು ಸಡಿಲಿಸುವುದರ ಮೂಲಕ ಸದರಿ ಪ್ರಾಯೋಜನೆಗಳಿಗೆ ಸರ್ಕಾರದಿಂದ ಮಂಜೂರಾತಿ ಪಡೆಯಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ನಿರ್ದೇಶನವನ್ನು ನೀಡಿರುತ್ತದೆಯೆಂದು ತಿಳಿಸಿರುತ್ತಾರೆ.

ಅಲ್ಲದೆ ಮೇಲ್ಕಂಡ ಈ ಮೂರೂ ಪ್ರಾಯೋಜನೆಗಳ ಮೊತ್ತವು ಕ್ರಮವಾಗಿ ರೂ. 113.03 ಲಕ್ಷಗಳು ಮತ್ತು ರೂ. 183.06 ಲಕ್ಷಗಳು ಹಾಗೂ ರೂ. 291.05 ಲಕ್ಷಗಳಾಗಿದ್ದು ಹೀಗೆ ಒಟ್ಟು ಮೊತ್ತವು ರೂ. 587.14 ಲಕ್ಷಗಳಾಗುತ್ತದೆ. ಈ ಮೊತ್ತ ರೂ. 50.00 ಲಕ್ಷಕ್ಕಿಂತ ಹೆಚ್ಚಿಗೆ ಇರುವುದರಿಂದ ನಿಗಮದ ಮೆಮೋರಾಂಡಂ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೋಶನ್ಸ್‌ನ ನಿಯಮ 33(1)ರನುಸಾರ ಸದರಿ ಪ್ರಾಯೋಜನೆಗಳಿಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 88 ಎಫ್‌ಪಿಸಿ 2012, ಬೆಂಗಳೂರು, ದಿನಾಂಕ : 18–1–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ಈ ಕೆಳಕಂಡ ಪ್ರಾಯೋಜನೆಗಳಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ : ಅಪಜೀ 29 ಎಫ್‌ಎಪಿ 2011, ದಿನಾಂಕ : 19–3–2011 ಮತ್ತು ಸುತ್ತೋಲೆ ಸಂಖ್ಯೆ : ಅಪಜೀ 31 ಎಫ್‌ಎಪಿ 2011, ದಿನಾಂಕ : 18–5–2011ರಲ್ಲಿರುವ ನಿರ್ಬಂಧನೆ ಮತ್ತು ಮಾರ್ಗಸೂಚಿಗಳಿಂದ ವಿನಾಯಿತಿ ನೀಡಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

**I. ದಿನಾಂಕ : 30–7–2012 ರಂದು ಸಲ್ಲಿಸಿದ ಪ್ರಾಯೋಜನೆಗಳು**

1) ಕೋಲಾರ ವಿಭಾಗದಲ್ಲಿ 300 ಹೆ. ಕ್ಷೇತ್ರಗಳಲ್ಲಿ ಪಲ್ಪ್‌ವುಡ್ ನೆಡುತೋಪುಗಳನ್ನು ಬೆಳೆಸುವುದು : ರೂ. 113.03 ಲಕ್ಷಗಳು

2) ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಧಾರವಾಡದ ಕ್ಷೇತ್ರಗಳಲ್ಲಿ 450 ಹೆ. ಕ್ಷೇತ್ರಗಳಲ್ಲಿ ಪಲ್ಪ್‌ವುಡ್ ನೆಡುತೋಪು ಬೆಳೆಸುವುದು : ರೂ. 183.06 ಲಕ್ಷಗಳು

**II. ದಿನಾಂಕ : 4–10–2012 ರಂದು ಸಲ್ಲಿಸಿದ ಪ್ರಾಯೋಜನೆ**

1) ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಧಾರವಾಡದ ಕ್ಷೇತ್ರಗಳಲ್ಲಿ 750 ಹೆ. ಕ್ಷೇತ್ರಗಳಲ್ಲಿ ಪಲ್ಪ್‌ವುಡ್ ನೆಡುತೋಪು ಬೆಳೆಸುವುದು : ರೂ. 291.05 ಲಕ್ಷಗಳು

ಸದರಿ ಪ್ರಸ್ತಾವನೆಗಳಿಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದೇ ಭರಿಸತಕ್ಕದ್ದು ಹಾಗೂ ಸರ್ಕಾರಕ್ಕೆ ಅನುದಾನಕ್ಕಾಗಿ ಯಾವುದೇ ಕೋರಿಕೆ ಸಲ್ಲಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 208**

## COMMERCE AND INDUSTRIES SECRETARIAT

**SUB :** Withdrawal of the Government Order-Entrusting M/s Ernst & Young Pvt. Ltd., the task of preparing K-SIP for Karnataka-reg.

**READ :** Government Order No. CI 54 SPI 2012, dated : 20-6-2012.

**Preamble :**

Above Government Order is issued approving the entrustment of the preparation of Karnataka Strategic Infrastructure plan to M/s Ernst & Young Pvt. Ltd., as on extension of work given to the firm as Knowledge Partner for GIM 2012, Under Rule 28E of KTPP Rules on a single source selection Basis.

As the incumbent consultant has not been able to fulfill the conditions laid by the Finance Department for extension of work Under Rule 28E of KTPP Rules, it is proposed to withdraw the order.

Hence the following order.

**GOVERNMENT ORDER NO. CI 54 SPI 2012, BANGALORE, DATED : 30-1-2013.**

Under the above circumstances, the approval accorded for the preparation of Karnataka Strategic Infrastructure plan by M/s Ernst & Young Pvt. Ltd., as on extension of work given to the firm as Knowledge Partner for GIM 2012, Under Rule 28E of KTPP Rules on a single source selection basis, vide **Government Order No. CI 54 SPI 2012, dated : 20-6-2012 has been withdrawn with immediate effect.**

By Order and in the name of the Governor of Karnataka,
**SHIVASHANKAR NAIK. L.**
Desk Officer (Technical Cell),
Commerce & Industries Department.

**P.R. 222**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ಉದ್ದಿಮೆದಾರರಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ಯು ಅಭಿವೃದ್ಧಿಪಡಿಸಿದ ಕೈಗಾರಿಕಾ ಪ್ರದೇಶದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ರಿಯಾಯಿತಿ ದರದಲ್ಲಿ ಜಮೀನಿನಲ್ಲಿ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಐ 305 ಸಿಎಸ್‌ಸಿ 2004, ದಿನಾಂಕ : 7–6–2005.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 323 ಎಸ್‌ಪಿಕ್ಯೂ 2010, ದಿನಾಂಕ : 7–5–2010.
3. ತಿದ್ದುಪಡಿ ಆದೇಶ ಸಂಖ್ಯೆ : ಸಿಐ 323 ಎಸ್‌ಪಿಕ್ಯೂ 2010, ದಿನಾಂಕ : 26–6–2012.
4. ಮಂಡಳಿಯ 321ನೇ ಸಭೆಯ ನಡವಳಿ ದಿನಾಂಕ : 27–12–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ಉದ್ದಿಮೆದಾರರಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ಯ ವತಿಯಿಂದ ಹಂಚಿಕೆಯಾಗುವ ನಿವೇಶನಗಳಿಗೆ ರಿಯಾಯತಿಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ, ಓದಲಾದ (1)ರ ಸರ್ಕಾರಿ ಆದೇಶವನ್ನು ಮುಂದುವರೆಸುತ್ತಾ ಕೆಐಎಡಿಬಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ಉದ್ದಿಮೆದಾರರಿಗೆ ಜಮೀನು/ನಿವೇಶನ ಹಂಚಿಕೆ ಮಾಡಲು ಎಲ್ಲಾ ನಿವೇಶನಗಳ ಜಮೀನಿನ ದರದ ಶೇಕಡ 40 ರಂತೆ ನಿಗದಿಪಡಿಸುವ ರಿಯಾಯಿತಿಯನ್ನು ಗರಿಷ್ಠ ರೂ. 5.00 ಲಕ್ಷಗಳಿಂದ ರೂ. 10.00 ಲಕ್ಷಗಳ ಮಿತಿಗೆ ಹೆಚ್ಚಿಸಿ ಮಂಡಳಿಯ ಮೂಲಗಳಿಂದಲೇ ಈ ಮೊತ್ತವನ್ನು ಮಂಜೂರು ಮಾಡಲು ಆದೇಶಿಸಲಾಗಿದೆ.

ಮೇಲೆ ಓದಲಾದ (3)ರ ತಿದ್ದುಪಡಿ ಆದೇಶದಲ್ಲಿ ರೂ. 10.00 ಲಕ್ಷಗಳ ಮಿತಿಗೆ ಹೆಚ್ಚಿಸಿ ಮಂಡಳಿಯ ಮೂಲಗಳಿಂದ ಭರಿಸಿ, ನಂತರ ಸರ್ಕಾರದಿಂದ ಮರುಪಾವತಿ ಪಡೆಯಲು ಆದೇಶಿಸಲಾಗಿದೆ.

ಮೇಲೆ ಓದಲಾದ (4)ರಲ್ಲಿ ಕೆಐಎಡಿಬಿ ತನ್ನ 321ನೇ ಸಭೆ ದಿನಾಂಕ : 27–12–2012 ರಲ್ಲಿ ಮೇಲೆ ಓದಲಾದ (1), (2) ಮತ್ತು (3)ರ ಆದೇಶಗಳನ್ನು ಕರ್ನಾಟಕ ವಿಧಾನ ಮಂಡಲದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಮಿತಿ ಸಭೆ ದಿಣಾಂಕ : 21–12–2012 ರಲ್ಲಿ ಪರಿಶೀಲಿಸಿ ಮಂಡಳಿಯು ಅಭಿವೃದ್ಧಿಪಡಿಸುವ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಉದ್ದಿಮೆದಾರರಿಗೆ ಅನುಕೂಲವಾಗುವಂತೆ ಶೇಕಡ 22.65 ರಷ್ಟು ಜಮೀನನ್ನು/ ನಿವೇಶನವನ್ನು ಕಡ್ಡಾಯವಾಗಿ ಮೀಸಲಿರಿಸಲು ಹಾಗೂ ಈ ನಿವೇಶನಗಳನ್ನು ಇತರರ ವರ್ಗದವರಿಗೆ ಹಂಚಿಕೆ ಮಾಡಬಾರದೆಂದು, ಅವರಿಗೆ ಶೇಕಡ 50ರ ರಿಯಾಯಿತಿ ದರದಲ್ಲಿ ನಿವೇಶನವನ್ನು ಹಂಚಿಕೆ ಮಾಡಿ ವ್ಯತ್ಯಾಸದ ಮೊತ್ತವನ್ನು ಮಂಡಳಿಯ ವತಿಯಿಂದಲೇ ಭರಿಸಬೇಕೆಂದು ಸೂಚಿಸಿರುವ ಹಿನ್ನೆಲೆಯಲ್ಲಿ, ಮಂಡಳಿಯು ತನ್ನ 321ನೇ ಸಭೆಯಲ್ಲಿ ಈ ಅಂಶಗಳನ್ನು ಪರಿಶೀಲಿಸಿತು.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 21 ಎಸ್‌ಪಿಐ 2013, ಬೆಂಗಳೂರು, ದಿನಾಂಕ : 2–1–2013**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇನ್ನು ಮುಂದೆ ಅಭಿವೃದ್ಧಿಪಡಿಸುವ ಎಲ್ಲಾ ಕೈಗಾರಿಕಾ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ಉದ್ದಿಮೆದಾರರಿಗೆ ಕೈಗಾರಿಕೆಯನ್ನು ಸ್ಥಾಪಿಸಲು ಹಂಚಿಕೆ ಮಾಡಲು ಶೇಕಡ 22.65 ರಷ್ಟು ಜಮೀನು/ನಿವೇಶನವನ್ನು ಕಡ್ಡಾಯವಾಗಿ ಮೀಸಲಿಡಬೇಕು ಹಾಗೂ ಈ ನಿವೇಶನಗಳನ್ನು ಇತರೆ ವರ್ಗದವರಿಗೆ ಹಂಚಿಕೆ ಮಾಡಬಾರದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ರಿಯಾಯಿತಿ ದರದಲ್ಲಿ ನಿವೇಶನ ಹಂಚಿಕೆ ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್, ಎಲ್.**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

P.R. 207

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಮೆ: ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರನ್ನನಗರ, ತಿಮ್ಮಾಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇದರ ಕಬ್ಬು ಅರೆಯುವ ಸಾಮರ್ಥ್ಯವನ್ನು 2500 ಟಿಸಿಡಿಯಿಂದ 5000 ಟಿಸಿಡಿಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕಬ್ಬು ಅಭಿವೃದ್ಧಿ ಇವರ ಪತ್ರ ಸಂಖ್ಯೆ: ಡಿಎಸ್‌ಕೆ/ಎಫ್‌ಐಎನ್/37/2012–13, ದಿನಾಂಕ: 23–1–2013

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿರವರ ದಿನಾಂಕ : 23–1–2013ರ ಪತ್ರದಲ್ಲಿ ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರನ್ನನಗರ, ತಿಮ್ಮಾಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿರುತ್ತಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಬೇಕಾಗುವ ಷೇರು ಬಂಡವಾಳ ಮತ್ತು ಸಾಲವನ್ನು ಯೋಜನಾ ವರದಿಯ ಪ್ರಕಾರ ಕ್ರೋಢೀಕರಿಸಲಾಗುವುದೆಂದು ಹಾಗೂ ಯೋಜನೆಗೆ ಬೇಕಾಗುವ ಸಾಲವನ್ನು ಹಣಕಾಸು ಸಂಸ್ಥೆಗಳಿಂದ ಪಡೆಯಲು ಸರ್ಕಾರದ ಖಾತರಿಯನ್ನು ಕೋರಲಾಗುವುದಿಲ್ಲವೆಂದು, ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಯಿಂದ ಹೆಚ್ಚುವರಿ ಕಬ್ಬು ಮೀಸಲು ಕ್ಷೇತ್ರಕ್ಕೆ ಕೋರುವುದಿಲ್ಲವೆಂದು ಮತ್ತು

ಕಾರ್ಖಾನೆಗೆ ಈಗಾಗಲೇ ಹಂಚಿಕೆಯಾಗಿರುವ ಕಬ್ಬು ಮೀಸಲು ಕ್ಷೇತ್ರದಲ್ಲಿಯೇ ಕಾರ್ಖಾನೆಗೆ ಬೇಕಾಗುವ ಕಬ್ಬನ್ನು ಅಭಿವೃದ್ಧಿಪಡಿಸಿಕೊಳ್ಳುವುದಾಗಿ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿರುತ್ತಾರೆ ಎಂದು ತಿಳಿಸಿ ಕಾರ್ಖಾನೆಯ ಕೋರಿಕೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 22 ಎಸ್‌ಜಿಎಫ್ 2013, ಬೆಂಗಳೂರು, ದಿನಾಂಕ : 2–2–2013**

ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರನ್ನನಗರ, ತಿಮ್ಮಾಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇದರ ಹಾಲಿ ಕಬ್ಬು ನುರಿಸುವ ಸಾಮರ್ಥ್ಯವನ್ನು 2500 ಟಿಸಿಡಿಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

1. ಕಾರ್ಖಾನೆಗೆ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳಬೇಕು.
2. ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದು.
3. ಹಣಕಾಸು ಸಂಸ್ಥೆಗಳಿಂದ ಪಡೆಯುವ ಸಾಲಕ್ಕೆ ಸರ್ಕಾರದ ಖಾತರಿ ನೀಡಲಾಗುವುದಿಲ್ಲ.
4. ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ವಾಯು/ಜಲ ಮಾಲಿನ್ಯತೆಗಳ ದೃಢೀಕರಣ ಪ್ರಮಾಣ ಪತ್ರವನ್ನು ಪಡೆದು ಸರ್ಕಾರಕ್ಕೆ ಸಲ್ಲಿಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಪರಮೇಶ್ವರಪ್ಪ**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

P.R. 221

## ENERGY SECRETARIAT

**SUB :** Approval for tendering 130MW Solar Power Projects under Solar Policy 2011-16 to meet the Renewable Purchase Obligations (RPO).

**READ :** 1. Solar Policy 2011-16 Notification No. EN 61 NCE 2011, dated : 1-7-2011.

2. Government Order No. EN 61 NCE 2011 (p1), Bangalore, dated : 22-7-2011.

**Preamble :**

In the Notification dated 1-7-2011 read at (1) above, Government have published the Solar Policy 2011-16 to promote Solar Power as a part of the Renewable Energy in the State. KREDL has been appointed as the nodal agency for facilitating and implementing this policy.

As per clause (4) of the Solar Policy 2011-16, it is proposed to install 200 MW up to 2015-16, with an annual capacity addition of 40 MW each year till 2016. The minimum capacity shall be 3 MW and maximum capacity shall be 10 MW per project for Solar Photo Voltaic and Minimum Capacity shall be 5 MW per project for Solar Thermal.

In the Government order read at (2) above, for procurement by ESCOMs, approval was accorded for combined bidding of 80 MW Solar Power capacity for the year 2011-12 and 2012-13 in one slot.

KREDL through competitive bidding process has allotted 80 MWs of Solar Power projects to various bidders. Out of this, Power Purchase Agreements (PPAs) for 70 MWs have been entered into by the respective ESCOMs. One allotted bidder for 10 MW Solar Thermal has backed out and his bid security has been appropriated, by KREDL.

The issue of considering tendering of balance 130 MW Solar Power through Competitive Bidding is examined and the following order is issued.

**GOVERNMENT ORDER NO. EN 180 NCE 2012, BANGALORE, DATED : 14-12-2012.**

In view of the facts explained above, Government accords approval to the following :

a. To meet the Solar RPO target mentioned in the Solar Policy 2011-16, approval is accorded for tendering balance 130 MW (as PPAs have already been entered into with ESCOMs for 70 MW) Solar Projects on reverse bidding by broadly following MNRE guidelines and NVVNL bidding standards.

b. To revise the capacity to be installed for procurement by ESCOMs under clause (4) of Solar Policy 2011-16, i.e. minimum allotment of Solar PV capacity from 3 MW per project to 15 MW per project and maximum allotment of Solar PV capacity from 10 MW per project to 100 MW per project.

KREDL, which is the nodal agency, is authorized to proceed further in the matter duly following KTPP Act.

This Order is issued with the concurrence of Finance Department vide note no : FD 805 Exp.1/2012, dated 31-7-2012 and FD 1207 Exp-1/12, dated : 20-10-2012.

By Order and in the name of the Governor of Karnataka,
**Kousalya**
Under Secretary to Government,
Energy Department.

P.R. 2302

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು ದೇಲಂತಬೆಟ್ಟು ಗ್ರಾಮದ ಶ್ರೀ ಲಕ್ಷ್ಮೀಜನಾರ್ಧನ ದೇವಸ್ಥಾನದ ಬಳಿ ಪ್ರವಾಹ ನಿಯಂತ್ರಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ/03/ನಯೋಕಾ/2011, ದಿನಾಂಕ: 13–2–2012.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ತಾಂಸ–5–ಸ.ಇಂ–11/ದ.ಕ.ಜಿ/ಮಂ.ತಾ/ಲಕ್ಷ್ಮೀಜನಾರ್ಧನ/ಇಪ್ರೊಕ್ಯೂರ್‌ಮೆಂಟ್/ಟೆಂಡರ್ ಅನುಮೋದನೆ/2012–13/3953, ದಿನಾಂಕ : 22–11–2012.

**ಪ್ರಸ್ತಾವನೆ :**

ರೂ. 50.00 ಲಕ್ಷ ಅಂದಾಜು ಮೊತ್ತದ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ದೇಲಂತಬೆಟ್ಟು ಗ್ರಾಮದ ಶ್ರೀ ಲಕ್ಷ್ಮೀಜನಾರ್ಧನ ದೇವಸ್ಥಾನದ ಬಳಿ ಪ್ರವಾಹ ನಿಯಂತ್ರಣ ಕಾಮಗಾರಿಯು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್.ಐ.ಡಿ.ಎಫ್–17ರಡಿ ರೂ. 3478.03 ಲಕ್ಷ ಮೊತ್ತದ 111 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿರುವ ಕಾಮಗಾರಿಗಳ ಪೈಕಿ ಒಂದಾಗಿರುತ್ತದೆ. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಮೊದಲ 3 ಬಾರಿ ಕರೆದ ಟೆಂಡರ್ ಕರೆಗಳಿಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲ. 4ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 10–9–2012 |
| ವಾರ್ತಾ ಭಾರತಿ ದಿನಪತ್ರಿಕೆ | 27–9–2012 |
| ಉದಯವಾಣಿ ದಿನಪತ್ರಿಕೆ | 28–9–2012 |

ದಿನಾಂಕ : 25–10–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 48,39,237/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗಾದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ಡಿ.ಹೆಚ್. ಮೇಲ್ಕಾರ್, 1ನೇ ದರ್ಜೆ ಗುತ್ತಿಗೆದಾರರು | 62,06,487/– | 28.25 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಹೆಚ್ ಮೇಲ್ಕಾರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 28.25 ರಷ್ಟು ಹೆಚ್ಚಾಗಿರುತ್ತದೆ ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 55,16,730/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ಪ್ರನಿಕಾ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 3ನೇ ಜನವರಿ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು ದೇಲಂತಬೆಟ್ಟು ಗ್ರಾಮದ ಶ್ರೀ ಲಕ್ಷ್ಮೀಜನಾರ್ಧನ ದೇವಸ್ಥಾನದ ಬಳಿ ಪ್ರವಾಹ ನಿಯಂತ್ರಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಮೊತ್ತ ರೂ. 48,29,237/–ಗಳ ಮೇಲೆ ಶೇ. 14.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 55,16,730/– (ರೂ. ಐವತ್ತ ಐದು ಲಕ್ಷ ಹದಿನಾರು ಸಾವಿರದ ಏಳು ನೂರ ಮೂವತ್ತು ರೂಪಾಯಿಗಳು ಮಾತ್ರ) ಶ್ರೀ ಡಿ.ಹೆಚ್. ಮೇಲ್ಕಾರ್, 1ನೇ ದರ್ಜೆ ಗುತ್ತಿದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 89**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು, ಸುಳ್ಳೇರಿ ಕೆರೆಯಿಂದ ಸಂಕಲಗೆರೆಕೆರೆ ಮತ್ತು ಮಳೂರು ಪಟ್ಟಣ ಕೆರೆ ಹಾಗೂ ಅಕ್ಕೂರು ಕೆರೆಗೆ ಏತ ನೀರಾವರಿ ಯೋಜನೆ ಮೂಲಕ ನೀರೊದಗಿಸುವ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ದಿನಾಂಕ : 22–11–2012ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ : ಮುಸದ/ತಾಂಸ–7/ಸ.ಇಂ.18/2012–13/3950.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಪತ್ರದಲ್ಲಿ ಮೇಲ್ಕಂಡ ಕಾಮಗಾರಿಗೆ 2012–13ನೇ ಸಾಲಿಗೆ ಮುಂದುವರೆದ 2010–11ನೇ ಸಾಲಿನ ದರಪಟ್ಟಿಯಂತೆ 925.00 ಲಕ್ಷ ರೂ.ಗಳಿಗೆ ತಯಾರಿಸಿದ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸ್ವೀಕೃತವಾಗಿದೆ.

ಉದ್ದೇಶಿತ ಯೋಜನೆಯಲ್ಲಿ ಸುಳ್ಳೇರಿ ಕೆರೆಯಿಂದ ಮೇಲ್ಕಂಡ ಕೆರೆಗಳಿಗೆ ನೀರು ತುಂಬಿಸಲು ಉದ್ದೇಶಿಸಿದೆ. 250 ಅಶ್ವ ಶಕ್ತಿಯ ಎರಡು ಕಾರ್ಯನಿರತ ಡೀಪ್ ವೆಲ್ ಟರ್ಬೈನ್ ಪಂಪುಗಳು ಹಾಗೂ ಇದೇ ಸಾಮರ್ಥ್ಯದ ಒಂದು ಹೆಚ್ಚುವರಿ (Standbye) ಪಂಪು ಅಳವಡಿಸಲು ಯೋಜಿಸಲಾಗಿದೆ ಹಾಗೂ ಹಿಂಗಾರು ಬೆಳೆಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಿದೆ. ಈ ಯೋಜನೆಯಿಂದ ಬಾಧಿತ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುವುದಲ್ಲದೆ ಕುಡಿಯುವ ನೀರಿನ ಬಳಕೆಗೆ ಉಪಯೋಗವಾಗುವುದು ಹಾಗೂ ಅಂತರ್ಜಲದ ಮಟ್ಟವು ವೃದ್ಧಿಗಾಗಿಯೂ ಸಹಕಾರಿಯಾಗಿರುತ್ತದೆ.

ಕಾಮಗಾರಿಯ ಅಂದಾಜು ಪಟ್ಟಿಯನ್ನು ದಿನಾಂಕ : 9–10–2012 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಗೆ ಮಂಡಿಸಿದ್ದು, ಸಮಿತಿಯು ಅಂದಾಜಿನಲ್ಲಿ ಕೆಲವೊಂದು ಅಂಶಗಳನ್ನು ಗಮನಿಸಿ, ಷರಾಗಳೊಂದಿಗೆ ಅಂದಾಜಿಗೆ ತೀರುವಳಿ ನೀಡಿದೆ.

2012–13ನೇ ಸಾಲಿನ ಲೆಕ್ಕಶೀರ್ಷಿಕೆ 4702–00–101–3–01–139 (ಯೋಜನೆ)–ಪ್ರಧಾನ ಕಾಮಗಾರಿಗಳು ಶೀರ್ಷಿಕೆಯಡಿ ರೂ. 925.00 ಲಕ್ಷಗಳ ಅಂದಾಜು ಮೊತ್ತ ಹಾಗೂ ರೂ. 308.33 ಲಕ್ಷ ರೂ.ಗಳ ಅನುದಾನದೊಂದಿಗೆ ಕೈಗೊಳ್ಳಲು ಅನುಮೋದನೆ ದೊರಕಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 66 ಮಸಾವಿ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 9ನೇ ಜನವರಿ 2013**.

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಸುಳ್ಳೇರಿ ಕೆರೆಯಿಂದ ಸಂಕಲಗೆರೆಕೆರೆ ಮತ್ತು ಮಳೂರು ಪಟ್ಟಣ ಕೆರೆ ಹಾಗೂ ಅಕ್ಕೂರು ಕೆರೆಗೆ ಏತ ನೀರಾವರಿ ಯೋಜನೆ ಮೂಲಕ ನೀರೊದಗಿಸುವ ಕಾಮಗಾರಿಯ ಅಂದಾಜು ಪಟ್ಟಿಗೆ 2012–13ನೇ ಸಾಲಿಗೆ ಮುಂದುವರೆದ 2010–11ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 925.00 ಲಕ್ಷ ರೂ.ಗಳ (ಒಂಬತ್ತು ಕೋಟಿ ಇಪ್ಪತ್ತು ಐದು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ದಿನಾಂಕ : 26–6–2012ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು. ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10. ನೀರಾವರಿ ಕಾಯ್ದೆಯಂತೆ ನೀರು ಬಳಕೆದಾರರ ಸಂಘವನ್ನು ಸ್ಥಾಪಿಸಿ ಕಾಮಗಾರಿ ಪೂರ್ಣಗೊಂಡ ನಂತರ ಅದರೊಡನೆ ಒಡಂಬಡಿಕೆಯನ್ನು ಮಾಡಿಕೊಂಡು ಯೋಜನೆಯನ್ನು ಸಂಘಕ್ಕೆ ಹಸ್ತಾಂತರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ : 22–12–2012ರ ಟಿಪ್ಪಣಿ ಸಂಖ್ಯೆ : PWD 761 FC-1/12 ರ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 94**

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಬೆಕ್ಕಿನಕೇರಿ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009(02), ದಿನಾಂಕ : 9–7–2010.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ ಎಇ–1/2012–13/6334/ದಿನಾಂಕ 24–11–2012.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಬೆಕ್ಕಿನಕೇರಿ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿ ಅಂದಾಜಿಗೆ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ರೂ. 128.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 16–10–2012 |
| ರಾಜ್ಯ ಟೆಂಡರ್ ಬುಲೆಟಿನ್ | 17–10–2012 |
| ವಿಜಯ ಕರ್ನಾಟಕ ದಿನಪತ್ರಿಕೆ | 17–10–2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 14–10–2012 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನ ಪತ್ರಿಕೆ | 13–10–2012 |

ದಿನಾಂಕ : 22–10–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ : 9–11–2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,23,05,244/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,52,84,283/– |
| ಗುತ್ತಿಗಾದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮೆ: ಯಶಸ್ ಕನ್‌ಸ್ಟ್ರಕ್ಷನ್ಸ್, (ಶ್ರೀ ಹರಿಪ್ರಸಾದ್ ರಾಮಕೃಷ್ಣ) ಒಂದನೇ ದರ್ಜೆ ಗುತ್ತಿಗೆದಾರರು | 1,82,30,416/– | 48.15 ಹೆಚ್ಚು | 19.28 ಹೆಚ್ಚು |

ಮೇಲ್ಕಂಡಂತೆ ಮೆ: ಯಶಸ್ ಕನ್‌ಸ್ಟ್ರಕ್ಷನ್ಸ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.28ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,52,84,283/–ಗಳ ಮೇಲೆ ಶೇಕಡಾ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,75,00,504/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 18 ಹೊಕೆನಿ (ತಾಂತ್ರಿಕ) 2012, ಬೆಂಗಳೂರು, ದಿನಾಂಕ : 3ನೇ ಜನವರಿ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಬೆಕ್ಕಿನಕೇರಿ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,52,84,283/–ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,75,00,504/–ಗಳಿಗೆ (ರೂ. ಒಂದು ಕೋಟಿ ಎಪ್ಪತ್ತೈದು ಲಕ್ಷದ ಐದು ನೂರ ನಾಲ್ಕು ಮಾತ್ರ) ಮೆ: ಯಶಸ್ ಕನ್‌ಸ್ಟ್ರಕ್ಷನ್ಸ್, ಒಂದನೇ ದರ್ಜೆ ಗುತ್ತಿದಾರರು, ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 88**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಚಿಕ್ಕಹೆಜ್ಜೂರು ಹೊಸಕೆರೆ ಮತ್ತು ನಾಲಾ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ–1/3/ಭೂಸ್ವಾಧೀನ/10–11/2196, ದಿನಾಂಕ : 1–10–2010.

**ಪ್ರಸ್ತಾವನೆ :**

ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಚಿಕ್ಕಹೆಜ್ಜೂರು ಹೊಸಕೆರೆ ಮತ್ತು ನಾಲಾ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕಹೆಜ್ಜೂರು ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಹುಣಸೂರು ಹೆಚ್ಚುವರಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ದಿನಾಂಕ : 1–10–2010ರ ಪತ್ರದಲ್ಲಿ ಕೋರಿದ್ದಾರೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ: 2–9–1993ರಂದು ಹೊರಡಿಸಲಾಗಿದೆ.
- ಭೂಸ್ವಾಧೀನ ಕಾಯ್ದೆ ಕಲಂ 11(ಎ) ರಂತೆ ಭೂಸ್ವಾಧೀನಾಧಿಕಾರಿಗಳು ಪರಿಹಾರದ ಐತೀರ್ಪು ಘೋಷಿಸಿದ ದಿನಾಂಕ: 30–12–1996.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಹುಣಸೂರು ಹೆಚ್ಚುವರಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಂಖ್ಯೆ : 55/02ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ಪ್ರತಿ ಎಕರೆ ಜಮೀನಿಗೆ ರೂ. 36,368/–ಗಳನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ದಿನಾಂಕ : 3–10–2009 ರಂದು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 164 ಎಲ್‌ಸಿಎಂ 2010, ದಿನಾಂಕ : 8–6–2011 ರಲ್ಲಿ ಅಭಿಪ್ರಾಯ ನೀಡಿದೆ. ಸದರಿ ಪ್ರಕರಣದಲ್ಲಿ ಪಾವತಿಸಬೇಕಾದ ಪರಿಹಾರ ಮೊತ್ತ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಚಿಕ್ಕಹೆಜ್ಜೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 55/02 | 30/1 | 0–22 | 1,22,105–00 |
| | | 5 | 0–08 | |
| | | 100 | 0–07 | |
| | **ಒಟ್ಟು** | | | **1,22,105–00** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 148 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 13ನೇ ನವೆಂಬರ್ 2012.**

ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಚಿಕ್ಕಹೆಜ್ಜೂರು ಹೊಸಕೆರೆ ಮತ್ತು ನಾಲಾ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕಹೆಜ್ಜೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ಆದೇಶದಂತೆ ಹೆಚ್ಚಿನ ಪರಿಹಾರ ರೂ. 1,22,105–00 ಗಳನ್ನು (ಒಂದು ಲಕ್ಷದ ಇಪ್ಪತ್ತೆರಡು ಸಾವಿರದ ಒಂದು ನೂರ ಐದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.

3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 1,22,105/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 98**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ಹಿರೇಕೆರೆಹಳ್ಳಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ–1/ಭೂಸ್ವಾಧೀನ/2012/1020, ದಿನಾಂಕ : 16–4–2012.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ಹಿರೇಕೆರೆಹಳ್ಳಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೊಮ್ಮಲಿಂಗನಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಳ್ಳಕೆರೆ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ದಿನಾಂಕ : 16–4–2012ರ ಪತ್ರದಲ್ಲಿ ಕೋರಿದ್ದಾರೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 19–3–1992ರಂದು ಹೊರಡಿಸಲಾಗಿದೆ.
- ಭೂಸ್ವಾಧೀನ ಕಾಯ್ದೆ ಕಲಂ 11(ಎ) ರಂತೆ ಭೂಸ್ವಾಧೀನಾಧಿಕಾರಿಗಳು ಪರಿಹಾರದ ಐತೀರ್ಪು ಘೋಷಿಸಿದ ದಿನಾಂಕ : 31–1–1994.

ಭೂಸ್ವಾಧೀನಕ್ಕೊಳಪಟ್ಟ ಜಮೀನಿನ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಳ್ಳಕೆರೆ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ : 295/02 ರಿಂದ 299/02 ರವರೆಗೆ ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 5–11–2008ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ. 32,700/–ಗಳ ಭೂಮೌಲ್ಯ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 19 ಎಲ್‌ಸಿಎ 2009, ದಿನಾಂಕ : 5–1–2009ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಬೊಮ್ಮಲಿಂಗನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1. | 295/02 | 5 | 1–19 | 196195 |
| 2. | 296/02 | 8/2 | 0–13 | 43220 |
| 3. | 297/02 | 8/1 | 0–38 | 126370 |
| 4. | 298/02 | 6 | 4–20 | 598603 |
| 5. | 299/02 | 7 | 2–16 | 319250 |
| | | | **ಒಟ್ಟು** | **1283638** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 66 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 13ನೇ ನವೆಂಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ಹಿರೇಕೆರೆಹಳ್ಳಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೊಮ್ಮಲಿಂಗನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ

ಆದೇಶದಂತೆ ಹೆಚ್ಚಿನ ಪರಿಹಾರ ರೂ. 12,83,638–00 ಗಳನ್ನು (ಹನ್ನೆರಡು ಲಕ್ಷದ ಎಂಬತ್ತ್ಮೂರು ಸಾವಿರದ ಆರುನೂರ ಮೂವತ್ತೆಂಟು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 12,83,638/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 99**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ–218(ಇ) ರಸ್ತೆಯಲ್ಲಿ ಬರುವ ಕುರಿಕೋಟಾ ಸೇತುವೆಯು ಶಿಥಿಲಗೊಂಡಿರುವುದರಿಂದ, ತಾವರಗೇರಾ ಕ್ರಾಸ್‌ನಿಂದ, ಸಾವತಖೇಡ, ಹೆರೂರು, ತಡಕಲ್ ಕ್ರಾಸ್ ಮೂಲಕ ಮಹಾಗಾಂವ್ ಕ್ರಾಸ್‌ನಲ್ಲಿ ರಾಹೆ–218ನ್ನು ಸಂಪರ್ಕಿಸುವ ಒಟ್ಟು 36 ಕಿಮೀ ಉದ್ದ ರಸ್ತೆ ಹಾಗೂ ತಾಜ್‌ಸುಲ್ತಾನ್‌ಪುರ, ಕಲ್ಲಹಂಗರಗಾ, ಚಿಂಚನಸೂರ, ಬೋದಾನ, ವಿ.ಕೆ. ಸಲಗಾರ, ಮಟಕಿ ತಾಂಡ, ಮಹಾಗಾಂವ್ ಕ್ರಾಸ್‌ನ ಮೂಲಕ ರಾಹೆ–218 ಅನ್ನು ಸಂಪರ್ಕಿಸುವ ಒಟ್ಟು 59,20 ಕಿಮೀ ಉದ್ದದ ಪರ್ಯಾಯ ರಸ್ತೆಗಳನ್ನು ಅಭಿವೃದ್ಧಿಪಡಿಸುವ ಕಾಮಗಾರಿಯ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ : ಮುಇಂ(ಉ)/ತಾಂಸ–4/ಸಇಂ–3/ಗುವಿ/2012–13/04283, ದಿನಾಂಕ : 10–08–2012.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 10–08–2012ರ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು, ಶ್ರೀರಂಗಪಟ್ಟಣ–ಬೀದರ್ ರಾಷ್ಟ್ರೀಯ ಹೆದ್ದಾರಿ 218ರ ಕಿ.ಮೀ. 362 ರಿಂದ ಕಿಮೀ 381ರ ನಡುವೆ ಬರುವ ಕುರಿಕೋಟಾ ಸೇತುವೆಯು ಶಿಥಿಲಗೊಂಡಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡರವರು ವರದಿ ಮಾಡುತ್ತಾ, ಸದರಿ ಸೇತುವೆ ಮೇಲೆ ವಾಹನ ಸಂಚಾರವನ್ನು ಸ್ಥಗಿತಗೊಳಿಸಿ ಈ ಕೆಳಕಂಡ ಎರಡು ಮಾರ್ಗಗಳಲ್ಲಿ ಪರ್ಯಾಯ ಸಂಚಾರ ವ್ಯವಸ್ಥೆ ಕಲ್ಪಿಸಲಾಗಿದೆ ಎಂದು ತಿಳಿಸಿರುತ್ತಾರೆ.

**ಮಾರ್ಗ–1 (ಲಘು ವಾಹನ ಹಾಗೂ ಬಸ್ ಸಂಚಾರಕ್ಕಾಗಿ):–** ರಾಷ್ಟ್ರೀಯ ಹೆದ್ದಾರಿಯಲ್ಲಿ ತಾವರಗೇರಾ ಕ್ರಾಸ್‌ನಿಂದ ಪ್ರಾರಂಭವಾಗುವ ಜಿಲ್ಲಾ ಮುಖ್ಯ ರಸ್ತೆಯ ಮೂಲಕ ಸಾವತಖೇಡ ಹಳ್ಳಿವರೆಗೆ 17 ಕಿಮೀ ಚಲಿಸಿ, ನಂತರ 7 ಕಿಮೀ ನೀರಾವರಿ ಇಲಾಖೆ ರಸ್ತೆ ಮೂಲಕ, ಹೆರೂರು ಗ್ರಾಮದ ಮೂಲಕ ತಡಕಲ್ ಕ್ರಾಸ್‌ನಲ್ಲಿ ರಾಜ್ಯ ಹೆದ್ದಾರಿ–32ನ್ನು ಸೇರಿಕೊಂಡು ರಾಜ್ಯ ಹೆದ್ದಾರಿ–32ರಲ್ಲಿ 12 ಕಿಮೀ ಚಲಿಸಿ ಮಹಾಗಾಂವ್ ಕ್ರಾಸ್‌ನಲ್ಲಿ ರಾಹೆ–218ನ್ನು ಸಂಪರ್ಕಿಸುವುದು: (ಒಟ್ಟು 36 ಕಿಮೀ ಉದ್ದ)

**ಮಾರ್ಗ–2 (ಬಾರಿ ಗಾತ್ರದ ವಾಹನಗಳ ಸಂಚಾರಕ್ಕಾಗಿ)–** ಗುಲ್ಬರ್ಗಾ ರಿಂಗ್ ರಸ್ತೆ ಮೂಲಕ ರಾಜ್ಯ ಹೆದ್ದಾರಿ–51ರಲ್ಲಿ ತಾಜ್‌ಸುಲ್ತಾನ್‌ಪುರ, ಕಲ್ಲಹಂಗರಗಾ, ಚಿಂಚನಸೂರ, ಬೋದಾನ, ವಿ.ಕೆ. ಸಲಗಾರ, ರವರೆಗೆ ಚಲಿಸಿ ನಂತರ ರಾಜ್ಯ ಹೆದ್ದಾರಿ–32ರಲ್ಲಿ ಮಟಕಿ ತಾಂಡದಿಂದ ಮಹಾಗಾಂವ್ ಕ್ರಾಸ್‌ನಲ್ಲಿ ರಾಹೆ–218 ಅನ್ನು ಸಂಪರ್ಕಿಸುವುದು. (ರಾಹೆ–51ರಲ್ಲಿ 35.90 ಕಿಮೀ ಮತ್ತು ರಾಹೆ–32ರಲ್ಲಿ 23.30 ಕಿಮೀ=ಒಟ್ಟು 59.20 ಕಿಮೀ ಉದ್ದ)

2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರು ಪರ್ಯಾಯ ವ್ಯವಸ್ಥೆ ಕಲ್ಪಿಸಲಾದ ಈ ಮೇಲಿನ ಎರಡು ಮಾರ್ಗಗಳಲ್ಲಿನ ರಸ್ತೆಗಳನ್ನು ಸುಗಮ ವಾಹನ ಸಂಚಾರದ ಸಲುವಾಗಿ ಅಭಿವೃದ್ಧಿಪಡಿಸುವುದು ಅವಶ್ಯಕತೆ ಇದೆ ಎಂದು ತಿಳಿಸುತ್ತಾ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ವಿವರವಾದ ಅಂದಾಜು ಪಟ್ಟಿಯೊಂದಿಗೆ, ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ:

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ತಾವರಗೇರಾ ಕ್ರಾಸ್‌ದಿಂದ ಸಾವತಖೇಡ ಜಿಲ್ಲಾ ಮುಖ್ಯ ರಸ್ತೆಯ ಕಿಮೀ 27.00 ರಿಂದ 38.20 ಕಿಮೀ ರವರೆಗಿನ ಒಟ್ಟು 11.20 ಕಿಮೀ ಉದ್ದದ ರಸ್ತೆಯನ್ನು 3.75 ಮೀ ಅಗಲದಿಂದ 5.50 ಮೀಗೆ ಅಗಲೀಕರಣ ಮಾಡಿ ಬಲಪಡಿಸುವುದು | 594.00 |

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 2. | ಸಾವತಖೇಡ ಕ್ರಾಸ್‌ದಿಂದ ತಡ್‌ಕಲ್ ಕ್ರಾಸ್ ರವರೆಗಿನ ನೀರಾವರಿ ಇಲಾಖೆಯ 0.00 ರಿಂದ 7.00 ಕಿಮೀ ವರೆಗಿನ 7.00 ಕಿಮೀ ಉದ್ದದ ರಸ್ತೆಯನ್ನು 5.50 ಮೀಗೆ ಅಗಲೀಕರಣ ಮಾಡಿ ಬಲಪಡಿಸುವುದು. | 392.00 |
| 3. | ಬಸವಕಲ್ಯಾಣ-ರಾಯಚೂರು ರಾಜ್ಯ ಹೆದ್ದಾರಿ-51ರ ಕಿಮೀ 34.85 ರಿಂದ 55.00ರವರೆಗಿನ ಆಯ್ದ ಭಾಗಗಳನ್ನು ಅಗಲೀಕರಣದೊಂದಿಗೆ ಅಭಿವೃದ್ಧಿ ಪಡಿಸುವುದು. | 247.00 |
| | **ಒಟ್ಟು** | **1233.00** |

3. 2012-13ನೇ ಸಾಲಿಗೆ, ಲೋಕೋಪಯೋಗಿ ಇಲಾಖೆಗೆ ಒದಗಿಸಲಾಗಿರುವ ಅನುದಾನವನ್ನು ಹಾಲಿ ಮುಂದುವರೆದ ಯೋಜನೆಗಳ ಕಾಮಗಾರಿಗಳಿಗೆ ಹಂಚಿಕೆ ಮಾಡಿ, 'ಅಪೆಂಡಿಕ್ಸ್-ಇ' ನಲ್ಲಿ ಅನುಮೋದನೆಗಾಗಿ ಸಲ್ಲಿಸಲಾಗಿದೆ. ಪ್ರಸ್ತಾಪಿತ ಕಾಮಗಾರಿಗಳಿಗೆ ಹೆಚ್ಚಿನ ಅನುದಾನದ ಅವಶ್ಯಕತೆ ಇರುತ್ತದೆ. ಆದ್ದರಿಂದ 5054-ಜಿಲ್ಲಾ ಮತ್ತು ಇತರೆ ರಸ್ತೆಗಳು 154 ಸುಧಾರಣೆ ಶೀರ್ಷಿಕೆ ಅಡಿಯಲ್ಲಿ ರೂ. 986.00 ಲಕ್ಷಗಳು ಹಾಗೂ 5054-ರಾಜ್ಯ ಹೆದ್ದಾರಿ-160 ನವೀಕರಣ ಶೀರ್ಷಿಕೆ ಅಡಿ ರೂ. 247.00 ಲಕ್ಷಗಳ ಹೆಚ್ಚುವರಿ ಅನುದಾನದ ಅವಶ್ಯಕತೆ ಇರುವುದರಿಂದ, ಹೆಚ್ಚುವರಿ ಅನುದಾನಕ್ಕೆ ಆರ್ಥಿಕ ಇಲಾಖೆಯನ್ನು ಕೋರಲಾಗಿ, ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ : PWD 561 FC-1/12 ದಿನಾಂಕ : 14-09-2012ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯ ನೀಡಿದೆ :

" Finance Department advises Public Works Department to include these works under the overall allocation for Roads provided to PWD during the year 2012-13"

4. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಮೊದಲನೇ ಷೆಡ್ಯೂಲ್‌ನ ಐಟಂ 15ರನ್ವಯ ಹಾಗೂ ಸದರಿ ನಿಯಮಗಳ ನಿಯಮ 17ರನ್ವಯ, ಸಚಿವ ಸಂಪುಟದ ಅನುಮೋದನೆ ಪಡೆದು, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ : ಲೋಇ 292 ಸಿಆರ್ ಎಂ 2012, ಬೆಂಗಳೂರು, ದಿನಾಂಕ : 16ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ :

**ಅ)** ತಾವರಗೇರಾ ಕ್ರಾಸ್‌ದಿಂದ ಸಾವತಖೇಡ ಜಿಲ್ಲಾ ಮುಖ್ಯ ರಸ್ತೆಯ ಕಿಮೀ 27.00 ರಿಂದ 38.20 ಕಿಮೀ ರವರೆಗಿನ ಒಟ್ಟು 11.20 ಕಿಮೀ ಉದ್ದದ ರಸ್ತೆಯನ್ನು 3.75 ಮೀ ಅಗಲದಿಂದ 5.50 ಮೀಗೆ ಅಗಲೀಕರಣ ಮಾಡಿ ಬಲಪಡಿಸುವ ಕಾಮಗಾರಿಯನ್ನು ರೂ. 594.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಹಾಗೂ ಅಂದಾಜು ಮೊತ್ತದ ಶೇಕಡ 33 ರಷ್ಟು ಅಂದರೆ ರೂ. 198 ಲಕ್ಷಗಳ ಅನುದಾನದೊಂದಿಗೆ 2012-13ನೇ ಸಾಲಿನ ಅಪೆಂಡಿಕ್ಸ್-ಇ ನಲ್ಲಿ ಸೇರಿಸಲು

**ಆ)** ಸಾವತಖೇಡ ಕ್ರಾಸ್‌ದಿಂದ ತಡ್‌ಕಲ್ ಕ್ರಾಸ್ ರವರೆಗಿನ ನೀರಾವರಿ ಇಲಾಖೆಯ 0.00 ರಿಂದ 7.00 ಕಿಮೀ ವರೆಗಿನ 7.00 ಕಿಮೀ ಉದ್ದದ ರಸ್ತೆಯನ್ನು 5.50 ಮೀಗೆ ಅಗಲೀಕರಣ ಮಾಡಿ ಬಲಪಡಿಸುವ ಕಾಮಗಾರಿಯನ್ನು ರೂ. 392 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಹಾಗೂ ಅಂದಾಜು ಮೊತ್ತದ ಶೇಕಡ 33 ರಷ್ಟು ಅಂದರೆ ರೂ. 130ಲಕ್ಷಗಳ ಅನುದಾನದೊಂದಿಗೆ 2012-13ನೇ ಸಾಲಿನ ಅಪೆಂಡಿಕ್ಸ್-ಇ ನಲ್ಲಿ ಸೇರಿಸಲು

ಇ) ಬಸವಕಲ್ಯಾಣ-ರಾಯಚೂರು ರಾಜ್ಯ ಹೆದ್ದಾರಿ-51ರ ಕಿಮೀ 34.85 ರಿಂದ 55.00 ರವರೆಗಿನ ಆಯ್ದ ಭಾಗಗಳನ್ನು ಅಗಲೀಕರಣದೊಂದಿಗೆ ಅಭಿವೃದ್ಧಿ ಪಡಿಸುವ ಕಾಮಗಾರಿಯನ್ನು ರೂ. 247 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಹಾಗೂ ಅಂದಾಜು ಮೊತ್ತದ ಶೇಕಡ 33 ರಷ್ಟು ಅಂದರೆ ರೂ. 82 ಲಕ್ಷಗಳ ಅನುದಾನದೊಂದಿಗೆ 2012-13ನೇ ಸಾಲಿನ ಅಪೆಂಡಿಕ್ಸ್-ಇ ನಲ್ಲಿ ಸೇರಿಸಲು.

2. ಮೇಲಿನ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು ಮತ್ತು ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.

3. **ಈ ಆದೇಶವು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಅದರಂತೆ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಆರ್. ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**P.R. 135**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ತಲಾ ರೂ. 5.00 ಕೋಟಿ ಮೊತ್ತ ಮೀರಿರುವ ನಾಲ್ಕು ಸೇತುವೆ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು ತಮ್ಮ ಪತ್ರ ಸಂಖ್ಯೆ: ಮುಇಂ(ಉ)/ತಾಸಂ-4/ಸಅ-1 / ಬೀದರ್/2011-12:4731, ದಿನಾಂಕ : 24-08-2012 ಹಾಗೂ ಪತ್ರ ಸಂಖ್ಯೆ: ಮುಇಂ(ಉ)/ತಾಸಂ-4/ಸಅ-3/ಗುವಿ/2012-13/5677, ದಿನಾಂಕ : 18-09-2012

1) ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರದಲ್ಲಿ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ತಲಾ ರೂ. 5.00 ಕೋಟಿ ಮೊತ್ತ ಮೀರಿರುವ ನಾಲ್ಕು ಸೇತುವೆ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ತಮ್ಮ ಪತ್ರ ಸಂಖ್ಯೆ : ಮುಇಂ(ಉ)/ತಾಸಂ-4/ಸಅ-1/ಬೀದರ/2011-12/4731, ದಿನಾಂಕ : 24-08-2012 ಹಾಗೂ ಪತ್ರ ಸಂಖ್ಯೆ : ಮುಇಂ(ಉ)/ತಾಸಂ-4/ಸಅ-3/ಗುವಿ/2012-13/5677, ದಿನಾಂಕ : 18-09-2012ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಕಾಮಗಾರಿಗಳ ವಿವರ ಈ ಕೆಳಗಿನಂತಿವೆ :

| ಕ್ರ. ಸಂ. | ಕಾಮಗಾರಿಗಳ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 01. | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಸಾಯಗಾಂವ್ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 750.00 |
| 02. | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಸಂಗಮ್ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 1300.00 |
| 03 | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಕೊಂಗಳಿ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 700.00 |
| 04 | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಹಲಸಿ-ತೋಗಾಂವ್ ಗ್ರಾಮದ ಹತ್ತಿರ ಸೇತುವೆ ನಿರ್ಮಾಣ. | 600.00 |
| | **ಒಟ್ಟು** | **3350.00** |

3. ಪ್ರಸ್ತಾಪಿತ ನಾಲ್ಕು ಸೇತುವೆಗಳು ಕೆಳಮಟ್ಟದ ಸೇತುವೆಗಳಾಗಿದ್ದು, ಮಳೆಗಾಲದಲ್ಲಿ ನಿರಂತರ ಪ್ರವಾಹ ಹರಿಯುವುದರಿಂದ ಸೇತುವೆ ಮುಳಗಡೆಯಾಗುತ್ತಿದ್ದು, ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರದ ಸಂಪರ್ಕ ಸ್ಥಗಿತಗೊಳ್ಳುತ್ತಿದೆ ಮತ್ತು ಸೇತುವೆ ಕಾಮಗಾರಿಗಳ ನಿರ್ಮಾಣದ ಬಗ್ಗೆ ವಿಧಾನ ಸಭೆಯಲ್ಲಿ ಭರವಸೆ ನೀಡಲಾಗಿದೆ.

4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಆರ್ಥಿಕ ಇಲಾಖೆಯು ಈ ಕೆಳಗಿನಂತೆ ಅಭಿಪ್ರಾಯ ನೀಡಿರುತ್ತದೆ.

" The proposal has been examined. In view of huge commitments, of PWD on the ongoing road work, it will not be possible to approve fresh works of Rs. 3350.00 lakhs."

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 35 ಸಿಬಿಆರ್ 2012, ದಿನಾಂಕ : 15ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ತಲಾ ರೂ. 5.00 ಕೋಟಿ ಮೊತ್ತ ಮೀರಿರುವ ಈ ಕೆಳಕಂಡ ನಾಲ್ಕು ಸೇತುವೆಗಳ ನಿರ್ಮಾಣ ಕಾಮಗಾರಿಗಳ ಅಂದಾಜು ಮೊತ್ತ ರೂ. 3350.00 ಲಕ್ಷಗಳಿಗೆ (ಮೂವತ್ತೂರು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪತ್ರಿಕೆಗೆ ಈ ಕೆಳಕಂಡ ಷರತ್ತಿನಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ಕಾಮಗಾರಿಗಳ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 01. | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಸಾಯಗಾಂವ್ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 750.00 |
| 02. | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಸಂಗಮ್ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 1300.00 |
| 03 | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಕೊಂಗಳಿ ಗ್ರಾಮದ ಹತ್ತಿರ ಮಾಂಜ್ರಾ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 700.00 |
| 04 | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಹಲಸಿ-ತೋಗಾಂವ್ ಗ್ರಾಮದ ಹತ್ತಿರ ಸೇತುವೆ ನಿರ್ಮಾಣ. | 600.00 |
| | **ಒಟ್ಟು** | **3350.00** |

2012-13ನೇ ಸಾಲಿನ ಅಪೆಂಡಿಕ್ಸ್-ಇ ಅಡಿಯಲ್ಲಿ ಈ ನಾಲ್ಕು ಸೇತುವೆ ಕಾಮಗಾರಿಗಳಿಗೆ ಅಂದಾಜು ಮೊತ್ತದ 1/3 (ಮೂರನೇ ಒಂದು ಭಾಗ) ಅನುದಾನ ಅಂದರೆ ರೂ. 1117.00 ಲಕ್ಷಗಳ ಅನುದಾನ ಹಂಚಿಕೆಯೊಂದಿಗೆ ಸೇರಿಸುವುದು.

ಈ ಆದೇಶವು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ. ಮತ್ತು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಆರ್. ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**P.R. 136**

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬಳ್ಳಾರಿ–ರೂಪನಗುಡಿ ರಸ್ತೆ (ರಾಜ್ಯ ಹೆದ್ದಾರಿ – 128ರ ಭಾಗ) ಕಿ.ಮೀ. 224.14ರಲ್ಲಿ ಹಗರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: ಸಿಇ(ಎನ್)ಟಿಎ–3/ಎಇ–1/ಬಿಎಲ್ ವೈ/2012–13/563, ದಿನಾಂಕ : 19–04–2012.

1. ಸರ್ಕಾರದ ಆದೇಶ ಸಂಖ್ಯೆ : ಲೋಇ 51 ಇಎಪಿ 2009, ದಿನಾಂಕ : 22–05–2010ರಲ್ಲಿ ಬಳ್ಳಾರಿ ಜಿಲ್ಲೆಯ ವಿಜಯನಗರ ವ್ಯಾಪ್ತಿಯಲ್ಲಿ ಬರುವ ರಸ್ತೆ ಮತ್ತು ಸೇತುವೆಗಳ ಅಭಿವೃದ್ಧಿ ಕಾಮಗಾರಿಗಳಿಗೆ ಲೆಕ್ಕ ಶೀರ್ಷಿಕೆ 5054 – ರಸ್ತೆ ಮತ್ತು ಸೇತುವೆಗಳು (ಯೋಜನೆ) ಅಡಿಯಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಒಟ್ಟು 38 ಕಾಮಗಾರಿಗಳಿಗೆ ರೂ. 100 ಕೋಟಿಗಳ ಅಂದಾಜು ಮೊತ್ತಕ್ಕೆ ನೀಡಲಾಗಿದ್ದು, ಈ ಕಾಮಗಾರಿಗಳಲ್ಲಿ ಬಳ್ಳಾರಿ – ರೂಪನಗುಡಿ ರಸ್ತೆ (ರಾಜ್ಯ ಹೆದ್ದಾರಿ – 128ರ ಭಾಗ) ಕಿ.ಮೀ. 224.14ರಲ್ಲಿ ಹಗರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಿಸುವ ಈ ಕಾಮಗಾರಿಗೆ ರೂ. 16.00 ಕೋಟಿಗಳ ಅಂದಾಜು ಮೊತ್ತಕ್ಕೆ ಅನುಮೋದನೆ ನೀಡಲಾಗಿತ್ತು.

2. ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ : ಸಿಇ(ಎನ್)ಟಿಎ–3/ಎಇ–1/ಬಿಎಲ್ ವೈ/2012–13/563, ದಿನಾಂಕ : 19–04–2012 ರಲ್ಲಿ ಬಳ್ಳಾರಿ – ರೂಪನಗುಡಿ ರಸ್ತೆ (ರಾಜ್ಯ ಹೆದ್ದಾರಿ – 128ರ ಭಾಗ) ಕಿ.ಮೀ. 224.14ರಲ್ಲಿ ಹಗರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಮಾಡುವ ಕಾಮಗಾರಿಯ ಒಟ್ಟು ಅಂದಾಜು ವೆಚ್ಚವನ್ನು ಲೆಕ್ಕ ಶೀರ್ಷಿಕೆ 5054 – ರಸ್ತೆ ಮತ್ತು ಸೇತುವೆಗಳು (ಯೋಜನೆ) ಅಡಿಯಲ್ಲಿ ರೂ. 16.00 ಕೋಟಿಗೆ ಮಂಜೂರಾತಿ ನೀಡಲಾಗಿದ್ದು, ಈ ಕಾಮಗಾರಿ ಗುತ್ತಿಗೆಯನ್ನು M/s IVRCL Infrastructures & Constructions Company (Pvt.) Ltd., ಇವರಿಗೆ ಟೆಂಡರ್ ಆಧಾರದ ಮೇಲೆ ನೀಡಲಾಗಿರುತ್ತದೆ. ಈ ಕಾಮಗಾರಿಯ ಮೂಲ ಅಂದಾಜು ತಯಾರಿಸುವಾಗ ತಾತ್ಕಾಲಿಕ ರಚನೆಯ ಭಾಗಗಳನ್ನು ಗಣನೆಗೆ ತೆಗೆದುಕೊಂಡು ಕಾಮಗಾರಿಯ ಅಂದಾಜನ್ನು ತಯಾರಿಸಲಾಗಿದ್ದು, ನಂತರ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ವಿಭಾಗ, ಬಳ್ಳಾರಿ, ಇವರು ಸೇತುವೆಯ ವಿನ್ಯಾಸ ತಯಾರಿಸುವ ಸಂಬಂಧ ಮೆ॥ ಗಲಗಲಿ ಅಸೋಸಿಯೇಟ್ಸ್, ಹುಬ್ಬಳ್ಳಿ, ಇವರಿಗೆ ಕನ್ಸಲ್ಟೆನ್ಸಿ ನೀಡಿದ್ದು, ಈ ವಿನ್ಯಾಸಗಾರರು ನೀಡಿರುವ ವಿನ್ಯಾಸವನ್ನು ಮೂಲ ಅಂದಾಜಿಗೆ ಹೋಲಿಕೆ ಮಾಡಿದಲ್ಲಿ, ಈ ಕೆಳಕಂಡ ಬದಲಾವಣೆಗಳು ಕಂಡುಬಂದಿರುವುದಾಗಿ ತಿಳಿಸಿರುತ್ತಾರೆ.

1. 17 Nos. of 25 mtr. C/C span PSC girder slab is proposed instead of 17 Nos. of 24.6 mtr. C/C span RCC girder slab as approved in the original estimate :
2. The well diameter for pier is 8.25 mtr. With steining thickness 1.1 mtr., for abutment 12 mtr. dia 1.60 mtr. Steining thickness is proposed. But in the original estimate well dia for pier is 6.5 mtr. With steining thickness 1.00 mtr. and for abutment 9.00 mtr. dia well with 1.2 mtr. steining thickness. As the latest code used for design is IRC-6:2010, wihere in the earthquake provisions are drastically revised. Hence, the minimum dia of well foundation for pier required is 8.25 mtr. to avoid the development of tension in the foundation ;
3. Cutting edge quantity : The quantity of cutting edge proposed by the consultants in the drawing is quite high compared to the quantity considered in the sanctioned estimate ;
4. Following additional lump sum provisions are made in the revised estimate required as per site condition :
   a. Dismantling of existing bridge : Rs. 30.50 lakhs.
   b. Shifting of utilities : Rs. 20.50 lakhs ;
   c. Soil exploration : Rs. 15.00 lakhs ;
   d. Construction of Bypass Road : Rs. 69.75 lakhs ;
5. Design and providing technical consultation : Rs. 61.46 lakhs.

1) ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ 2011–12ನೇ ಸಾಲಿನ ಷೆಡ್ಯೂಲ್ ಆಫ್ ರೇಟ್ಸ್ ಪ್ರಕಾರ ರೂ. 25.50 ಕೋಟಿಗಳಿಗೆ ಪರಿಷ್ಕೃತ ಅಂದಾಜು ಪಟ್ಟಿ ತಯಾರಿಸಲಾಗಿದ್ದು, ಸರ್ಕಾರದ ಮಂಜೂರಾತಿ, ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಇವರು ಕೋರಿರುತ್ತಾರೆ.

2) ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ಬಳ್ಳಾರಿ – ರೂಪನಗುಡಿ ರಸ್ತೆ (ರಾಜ್ಯ ಹೆದ್ದಾರಿ – 128ರ ಭಾಗ) ಕಿ.ಮೀ. 224–14ರಲ್ಲಿ ಹಗರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾಮಗಾರಿ ವಿನ್ಯಾಸದಲ್ಲಿ ಆದ ಬದಲಾವಣೆಯಿಂದ, ಹೆಚ್ಚುವರಿ ಕೆಲಸ ಸೇರ್ಪಡೆಗೊಳಿಸಿರುವುದರಿಂದ ಉಂಟಾಗಿರುವ ಪರಿಷ್ಕೃತ ಅಂದಾಜು ಮೊತ್ತ ರೂ. 25.50 ಕೋಟಿಗಳಾಗಿರುತ್ತವೆ. ಇದು ಮೂಲ ಅನುಮೋದಿತ ಅಂದಾಜು ಮೊತ್ತಕ್ಕಿಂತ ಶೇಕಡ 59.375 ರಷ್ಟು ಹೆಚ್ಚಾಗಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ : ಲೋಇ 60 ಸಿಬಿಆರ್ 2012, ದಿನಾಂಕ : 16ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಬಳ್ಳಾರಿ–ರೂಪನಗುಡಿ ರಸ್ತೆ (ರಾಜ್ಯ ಹೆದ್ದಾರಿ – 128ರ ಭಾಗ) ಕಿ.ಮೀ. 224.14ರಲ್ಲಿ ಹಗರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಮಾಡುವ ಕಾಮಗಾರಿಯ ಪರಿಷ್ಕೃತ ಅಂದಾಜು ಮೊತ್ತ ರೂ. 25.50 ಕೋಟಿಗಳ (ಇಪ್ಪತ್ತೈದು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : PWD 609 FC-I/12 ದಿನಾಂಕ : 28–09–2012ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಆರ್. ರೇವಣ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**P.R. 137**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 5054–(ಯೋಜನೆ) ಇತರೆ ರಸ್ತೆ ನಿರ್ಮಾಣ ಅಡಿಯಲ್ಲಿ, ಗುಲಬರ್ಗಾ ಜಿಲ್ಲೆ, ಚಿತ್ತಾಪೂರ/ಗುಲಬರ್ಗಾ ತಾಲ್ಲೂಕಿನ ಬಸವಕಲ್ಯಾಣ–ರಾಯಚೂರು ರಾಜ್ಯ ಹೆದ್ದಾರಿ–51 (ಗುಲಬರ್ಗಾದಿಂದ ವಾಡಿ) ರಸ್ತೆ ಕಿ.ಮೀ. 67.00 ರಿಂದ 99.80ರ ವರೆಗೆ ಸುಧಾರಣೆ ಕಾಮಗಾರಿಯ ಪರಿಷ್ಕೃತ ಅಂದಾಜು ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಲೋಇ 328 ಸಿಆರ್‌ಎಂ 2010, ದಿನಾಂಕ : 16–12–2010.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: ಮುಇಂ/ತಾಸ–4/ಸಇಂ–2/ಗುವಿ/2012–13/1388, ದಿನಾಂಕ : 20–04–2012.

**ಪ್ರಸ್ತಾವನೆ :**

1) ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶ ದಿನಾಂಕ : 16–12–2010ರಲ್ಲಿ, 5054 (ಯೋಜನೆ)–ಇತರೆ ರಸ್ತೆ ನಿರ್ಮಾಣ ಶೀರ್ಷಿಕೆಯಡಿ ಗುಲಬರ್ಗಾ ಜಿಲ್ಲೆ, ಚಿತ್ತಾಪೂರ/ಗುಲಬರ್ಗಾ ತಾಲ್ಲೂಕಿನ ಬಸವಕಲ್ಯಾಣ–ರಾಯಚೂರು ರಾಜ್ಯ ಹೆದ್ದಾರಿ–51 (ಗುಲಬರ್ಗಾದಿಂದ ವಾಡಿ) ರಸ್ತೆ ಕಿ.ಮೀ. 67.00 ರಿಂದ 99.80 ರವರೆಗೆ ಸುಧಾರಣೆ ಕಾಮಗಾರಿಯನ್ನು ರೂ. 36.50 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

2) ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ದಿನಾಂಕ : 20–04–2012ರ ಪತ್ರದಲ್ಲಿ ಈ ಕಾಮಗಾರಿಯ ಮೂಲ ಅಂದಾಜು ಮೊತ್ತ ರೂ. 36.50 ಕೋಟಿಯಿಂದ ರೂ. 40.86 ಕೋಟಿಗೆ ಈ ಕೆಳಕಂಡ ಕಾರಣಗಳಿಂದಾಗಿ ಪರಿಷ್ಕೃತವಾಗಲಿದ್ದು, ಮಂಜೂರಾದ ಅಂದಾಜು ಪತ್ರಿಕೆಯ ಮೊತ್ತಕ್ಕೆ ಹೋಲಿಸಿದಾಗ ರೂ. 4.36 ಕೋಟಿ ಹೆಚ್ಚುವರಿಯಾಗುತ್ತಿದ್ದು, ಇದು ಶೇಕಡಾವಾರು 11.93ರಷ್ಟು ಆಗಿದ್ದು, ಈ ಪರಿಷ್ಕೃತ ಅಂದಾಜಿಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

(i) ಮಂಜೂರಾದ ಅಂದಾಜು ಪತ್ರಿಕೆಯಲ್ಲಿ ರಸ್ತೆ ಕಿ.ಮೀ. 67.00 ರಿಂದ 99.80ರವರೆಗೆ ಅಂದರೆ ಗುಲಬರ್ಗಾ ಆರ್.ಟಿ.ಓ. ಕ್ರಾಸ್ ದಿಂದ ರಾವೂರ ಕ್ರಾಸ್ ವಾಡಿ ವರೆಗೆ ಒಟ್ಟು 32.80 ಕಿ.ಮೀ. ರಸ್ತೆ ಸುಧಾರಣೆ ಮಾಡಲು ಅವಕಾಶ ಮಾಡಲಾಗಿದೆ. ಆದರೆ ಈಗ ಸದರಿ ರಸ್ತೆ ಕಿ.ಮೀ. 67.00 ರಿಂದ 68.65ರವರೆಗೆ ಅಂದರೆ ಗುಲಬರ್ಗಾ ಆರ್.ಟಿ.ಓ ಕ್ರಾಸ್ ನಿಂದ ರಿಂಗ್ ರಸ್ತೆಯವರೆಗೆ ಒಟ್ಟು 1.65 ಕಿ.ಮೀ ಉದ್ದ ರಸ್ತೆಯು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುತ್ತಿದ್ದು, ಈ ಉದ್ದದ ರಸ್ತೆಯನ್ನು ಕೈಬಿಟ್ಟು, ಕಿ.ಮೀ. 68.65 ರಿಂದ 99.80 ರವರೆಗಿನ ರಸ್ತೆಯನ್ನು ಅಭಿವೃದ್ಧಿಪಡಿಸಲು ಪ್ರಸ್ತಾಪಿಸಿರುವುದರಿಂದ.

(ii) ಗುಲಬರ್ಗಾ–ವಾಡಿ ರಸ್ತೆಯು ಬಸವಕಲ್ಯಾಣ–ರಾಯಚೂರು ರಾಜ್ಯ ಹೆದ್ದಾರಿ–51ರ ಭಾಗವಾಗಿದ್ದು, ಗುಲಬರ್ಗಾ ರಿಂಗ್ ರಸ್ತೆಯಿಂದ ಲಕ್ಷ್ಮೀಪೂರ ವಾಡಿ ಗೇಟ್‌ವರೆಗೆ ಅಂದರೆ ಕಿ.ಮೀ. 68.65 ರಿಂದ 103.15ರವರೆಗೆ ಒಟ್ಟು 34.50 ಕಿ.ಮೀ. ಉದ್ದವಾಗುತ್ತದೆ. ಮಂಜೂರಾದ ಅಂದಾಜು ಪತ್ರಿಕೆಯಲ್ಲಿ ಸದರಿ ರಸ್ತೆ ಕಿ.ಮೀ. 99.80 ರವರೆಗೆ ಮಾತ್ರ ಪರಿಗಣಿಸಲಾಗಿದೆ. ಬಾಕಿ ಉಳಿಯುವ ಕಿ.ಮೀ. 99.80 ರಿಂದ 103.15ರವರೆಗೆ ಒಟ್ಟು 3.35 ಕಿ.ಮೀ. ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸದೇ ಇದ್ದರೆ ರಸ್ತೆಯು ವಾಡಿಯವರೆಗೆ ತಲುಪದೇ ಸ್ಥಗಿತಗೊಳ್ಳುತ್ತದೆ ಎಂದು ತಿಳಿಸಿ ಮಾನ್ಯ ಶಾಸಕರು ಚಿತ್ತಾಪೂರ ಮತಕ್ಷೇತ್ರ ಇವರು ಬಾಕಿ ಉಳಿಯುವ 3.35 ಕಿ.ಮೀ. ರಸ್ತೆಯನ್ನು ಅಭಿವೃದ್ಧಿಪಡಿಸಲು ಕೋರಿರುತ್ತಾರೆ ಶಾಸಕರ ಕೋರಿಕೆಯ ಮೇರೆಗೆ ಬಾಕಿ ಉಳಿಯುವ ಕಿ.ಮೀ. 99.80 ರಿಂದ 103.15 ರವರೆಗೆ ಒಟ್ಟು 3.35 ಕಿ.ಮೀ. ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಲು ಪರಿಗಣಿಸಬೇಕಾಗಿರುವುದರಿಂದ, ಗುಲಬರ್ಗಾ ಮಹಾನಗರ ವ್ಯಾಪ್ತಿಯ 1.65 ಕಿ.ಮೀ. ಉದ್ದದ ರಸ್ತೆ ಕೈಬಿಟ್ಟಲ್ಲಿ, ಒಟ್ಟಾರೆಯಾಗಿ 1.7 ಕಿ.ಮೀ. (3.35 ಕಿ.ಮೀ.–1.65 ಕಿ.ಮೀ.) ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಬೇಕಾಗುತ್ತದೆ ಎಂದು ತಿಳಿಸುತ್ತಾ, ಇದಕ್ಕಾಗಿ ರೂ. 2.01 ಕೋಟಿಗಳು ಹೆಚ್ಚುವರಿ ಬೇಕಾಗುತ್ತದೆ.

(iii) ಮಂಜೂರಾದ ಅಂದಾಜು ಪತ್ರಿಕೆಯಲ್ಲಿ ರಸ್ತೆ ಅಗಲೀಕರಣವಿದ್ದು, ಅಗಲೀಕರಣ ಮಾಡಲು ರಸ್ತೆಯ ಮೇಲೆ ಹಾಲಿ ಇರುವ ಮರಗಳು, ಎಲ್‌ಟಿ, ಹೆಚ್‌ಟಿ ಲೈನ್, ವಿದ್ಯುತ್ ಕಂಬಗಳು, ನೀರು ಸರಬರಾಜು ಪೈಪುಗಳನ್ನು ಸ್ಥಳಾಂತರಿಸಬೇಕಾಗುತ್ತದೆ. ಆದರೆ ಸದರಿ ಕೆಲಸಗಳಿಗೆ ಮಂಜೂರಾದ ಅಂದಾಜು ಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿರುವುದಿಲ್ಲ. ಹೀಗಾಗಿ ರೂ. 1.53 ಕೋಟಿಗಳು ಹೆಚ್ಚುವರಿ ಬೇಕಾಗುತ್ತದೆ.

ಈ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 214 ಸಿಆರ್‌ಎಂ 2012, ಬೆಂಗಳೂರು, ದಿನಾಂಕ : 17ನೇ ನವೆಂಬರ್ 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ, ಗುಲಬರ್ಗಾ ಜಿಲ್ಲೆ, ಚಿತ್ತಾಪೂರ/ಗುಲಬರ್ಗಾ ತಾಲ್ಲೂಕಿನ ಬಸವಕಲ್ಯಾಣ–ರಾಯಚೂರು ರಾಜ್ಯ ಹೆದ್ದಾರಿ–51 (ಗುಲಬರ್ಗಾದಿಂದ ವಾಡಿ) ರಸ್ತೆ ಕಿ.ಮೀ. 67.00 ರಿಂದ 99.80 ರವರೆಗಿನ ಸಂಪರ್ಕ ರಸ್ತೆ ಅಭಿವೃದ್ಧಿ ಕಾಮಗಾರಿಯ ಪರಿಷ್ಕೃತ ಅಂದಾಜು ಮೊತ್ತ ರೂ. 40.86 ಕೋಟಿ (ರೂಪಾಯಿಗಳು ನಲವತ್ತು ಕೋಟಿ ಎಂಬತ್ತಾರು ಲಕ್ಷಗಳು ಮಾತ್ರ)ಗಳ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

3) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : PWD 474 FC-1/2012 ದಿನಾಂಕ: 17–08–2012ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಆರ್. ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**P.R. 138**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಮನಗರ ಹಾಗೂ ಚನ್ನಪಟ್ಟಣ ನಗರಗಳಿಗೆ ಟಿ. ಕೆ. ಹಳ್ಳಿಯ ಮೂಲದಿಂದ ಮತ್ತು ಅರ್ಕಾವತಿ ನದಿಗೆ ಅಡ್ಡಲಾಗಿ ಆರ್.ಸಿ.ಸಿ ನಿರ್ಮಾಣ ಮಾಡಿ ಪಟ್ಟಣಗಳಿಗೆ ಅಂದಾಜು ವೆಚ್ಚ ರೂ. 26.00 ಕೋಟಿಗಳಲ್ಲಿ ತಡೆಗೋಡೆ (ಒಡ್ಡು) ನಿರ್ಮಿಸಿ ನೀರನ್ನು ಒದಗಿಸುವ ಯೋಜನೆಗೆ ತಾತ್ವಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ : /ತಾಂತ್ರಿಕ/ತಾ.ಸ–7/ಸಅ–9/ಆರ್.ಸಿ.ಸಿ./ತಡೆಗೋಡೆ/ರಾಮನಗರ/3300/2011–12, ದಿನಾಂಕ : 06–01–2012.

**ಪ್ರಸ್ತಾವನೆ :**

ರಾಮನಗರ ನಗರವು ರಾಮನಗರ ಜಿಲ್ಲೆಯ, ಜಿಲ್ಲಾ ಕೇಂದ್ರವಾಗಿದ್ದು, ಚನ್ನಪಟ್ಟಣ ನಗರವು ತಾಲ್ಲೂಕು ಕೇಂದ್ರವಾಗಿದೆ. ಈ ಪಟ್ಟಣಗಳ ಜನಸಂಖ್ಯೆ 2021ರಲ್ಲಿ 3,00,000 ಆಗಬಹುದೆಂದು ಅಂದಾಜಿಸಲಾಗಿದೆ. ಪ್ರಸ್ತುತ ಈ ಪಟ್ಟಣಗಳಿಗೆ ಸಂಯೋಜಿತ ನೀರು ಸರಬರಾಜು ಯೋಜನೆಯಡಿ 2002ರಲ್ಲಿ ರೂ. 2424.00 ಲಕ್ಷಗಳ ಮೊತ್ತದ ಅಂದಾಜಿನಲ್ಲಿ ವಿಶ್ವಬ್ಯಾಂಕ್ ಯೋಜನೆಯಡಿ ಟಿ. ಕೆ. ಹಳ್ಳಿಯ ಬಳಿ ಶಿಂಷಾ ನದಿಯಿಂದ 18 ಎ.ಎಲ್.ಡಿ. ಸಾಮರ್ಥ್ಯದ ನೀರು ಸರಬರಾಜು ಯೋಜನೆಯನ್ನು ವಿನ್ಯಾಸಿಸಿ 2006ರಲ್ಲಿ ಅಂದಾಜಿಸಲಾದ 1.00 ಲಕ್ಷ ಜನಸಂಖ್ಯೆಗೆ ಹಾಗೂ 2021ರಲ್ಲಿ ಅಂದಾಜಿಸಲಾದ 3.00 ಲಕ್ಷ ಜನಸಂಖ್ಯೆಗೆ 26 ಎಂ.ಎಲ್.ಡಿ. ನೀರನ್ನು ಸರಬರಾಜು ಮಾಡಲು ರೂಪಿಸಲಾಗಿತ್ತು.

ಪ್ರಸ್ತುತ ಮೇಲಿನ ಯೋಜನೆಯು 2 ನಗರಗಳಿಗೆ ಸಾಕಷ್ಟು ಪ್ರಮಾಣದಲ್ಲಿ ನೀರು ಸರಬರಾಜು ಮಾಡಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ, ಹೊಸ ಬಡಾವಣೆಗಳು ಶೀಘ್ರವಾಗಿ ಅಭಿವೃದ್ಧಿಗೊಳ್ಳುತ್ತಿರುವ ಪ್ರಯುಕ್ತ ಹಾಗೂ ಪಟ್ಟಣಗಳ ಜನಸಂಖ್ಯೆಯು ವೇಗವಾಗಿ ಬೆಳೆಯುತ್ತಿರುವ ಹಿನ್ನೆಲೆಯಲ್ಲಿ ಹಾಲಿ ಇರುವ ನೀರು ಸರಬರಾಜು ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವುದು ಅನಿವಾರ್ಯವಾಗಿರುತ್ತದೆ. ಆದ್ದರಿಂದ ಪ್ರಸ್ತುತ ನೀರು ಸರಬರಾಜು ಮಾಡುವ ಯೋಜನೆಯನ್ನು 18 ಎಂ.ಎಲ್.ಡಿ. ಗಾತ್ರದಿಂದ 26 ಎಂ.ಎಲ್.ಡಿ.ಗೆ ಹೆಚ್ಚಿಸಲು ಯೋಜನೆಯನ್ನು ರೂಪಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಈ ಯೋಜನೆಯನ್ನು 2011–12ನೇ ಸಾಲಿನ ದರಪಟ್ಟಿಯನ್ವಯ ರೂ. 2600.00 ಲಕ್ಷಗಳಲ್ಲಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | |
|---|---|---|
| ಕರ್ನಾಟಕ ಸರ್ಕಾರದ ಅನುದಾನ (60%) | ರೂ. | 1,560.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (30%) | ರೂ. | 780.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (10%) | ರೂ. | 260.00 ಲಕ್ಷಗಳು |
| | ರೂ. | 2600.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ. 1467.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಈ ಯೋಜನೆಗೆ ರಾಮನಗರ ಮತ್ತು ಚನ್ನಪಟ್ಟಣ ನಗರ ಸಭೆಗಳು ಕ್ರಮವಾಗಿ ದಿನಾಂಕ : 31–10–2011 ಮತ್ತು 15–12–2011 ರಂದು ನಡೆದ ಸಭೆಯ ವಿಷಯ ಸಂಖ್ಯೆ : 49(2) ಮತ್ತು 43ರಲ್ಲಿ, ಯೋಜನೆಯ ಆರ್ಥಿಕ ಮಾದರಿಯಂತೆ ತನ್ನ ಪಾಲಿನ ಮೊತ್ತವಾದ ಒಟ್ಟು ರೂ. 260.00 ಲಕ್ಷಗಳನ್ನು ಮಂಡಳಿಗೆ ಭರಿಸಲು ಒಪ್ಪಿಗೆ ನೀಡಿರುತ್ತದೆ. ಯೋಜನೆಯನ್ನು ಕಾರ್ಯಗತಗೊಳಿಸುವಾಗ ಸಾಮಗ್ರಿಗಳ ಬೆಲೆ ಏರಿಕೆಯಾದಲ್ಲಿ ಮತ್ತು ತಾಂತ್ರಿಕವಾಗಿ ಆಗುವ ಬದಲಾವಣೆ ಅಥವಾ ಇನ್ನಿತರ ಅನಿರೀಕ್ಷಿತ ಕಾರಣಗಳಿಂದ ಅಂದಾಜಿಗಿಂತ ಹೆಚ್ಚಾದ ವೆಚ್ಚವನ್ನು ಭರಿಸಲು ಮತ್ತು ಯೋಜನೆಯಡಿ ಅಗತ್ಯವಿರುವ ಜಮೀನನ್ನು ನಗರಸಭೆ ವತಿಯಿಂದ ನೀಡಲು ಹಾಗೂ ಆಡಳಿತಾತ್ಮಕ ಅನುಮೋದನೆ ಮತ್ತು ತಾಂತ್ರಿಕ ಅನುಮೋದನೆಯಲ್ಲಿ ವಿಧಿಸುವ ಷರತ್ತು ಹಾಗೂ ನಿಬಂಧನೆಗಳಿಗೆ ಮತ್ತು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಯೋಜನೆಯ ನಿರ್ವಹಣೆಯನ್ನು ವಹಿಸಿಕೊಳ್ಳಲು ಒಪ್ಪಿ ಠರಾವು ಪಾಸು ಮಾಡಿರುತ್ತವೆ.

ಸದರಿ ಯೋಜನೆಯ ಇ.ಟಿ.ಪಿ. ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ. 5ಕ್ಕೆ ಮಿತಿಗೊಳಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ. 2148.75 ಲಕ್ಷಗಳಿಗೆ ಶೇಕಡ 5ರಷ್ಟು ಇಟಿಪಿಯನ್ನು ಅಂದರೆ ರೂ. 107.45 ಲಕ್ಷಗಳನ್ನು ಸೇರಿಸಿ ಒಟ್ಟು ಯೋಜನೆಯ ಅಂದಾಜು ಮೊತ್ತವನ್ನು ರೂ. 2256.20 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿರುತ್ತದೆ. ಯೋಜನೆಯ ಅಂದಾಜಿನಲ್ಲಿ ಸೇರಿಸಿರುವ ಎಸ್ಕಲೇಷನ್ ದರವಾದ ರೂ. 128.93 ಲಕ್ಷಗಳನ್ನು ಸ್ಥಳೀಯ ಸಂಸ್ಥೆಗಳೇ ಭರಿಸಲು ಒಪ್ಪಿ ಠರಾವು ಪಾಸು ಮಾಡಿರುವುದರಿಂದ ಸದರಿ ಮೊತ್ತವನ್ನು ಅಂದಾಜು ಪಟ್ಟಿಯಿಂದ ಹೊರತುಪಡಿಸಬೇಕಾಗಿರುತ್ತದೆ. ಆದ್ದರಿಂದ, ಸದರಿ ಯೋಜನಾ ವೆಚ್ಚವನ್ನು ರೂ. 2256.20 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 01 ಯುಡಬ್ಲ್ಯೂಎಸ್ 2012 ಬೆಂಗಳೂರು, ದಿನಾಂಕ : 19ನೇ ಜೂನ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲಯಯಲ್ಲಿ ರಾಮನಗರ ಹಾಗೂ ಚನ್ನಪಟ್ಟಣ ನಗರಗಳಿಗೆ ಟಿ.ಕೆ. ಹಳ್ಳಿ ಮೂಲದಿಂದ ಮತ್ತು ಅರ್ಕಾವತಿ ನದಿಗೆ ಅಡ್ಡಲಾಗಿ ಆರ್‌ಸಿಸಿ ತಡೆಗೋಡೆ ನಿರ್ಮಾಣ ಮಾಡಿ ಅಂದಾಜು ರೂ. 2,256.20 ಲಕ್ಷಗಳಲ್ಲಿ (ರೂ. ಎರಡು ಸಾವಿರದ ಇನ್ನೂರ ಐವತ್ತಾರು ಲಕ್ಷ ಇಪ್ಪತ್ತು ಸಾವಿರ ಮಾತ್ರ) ನೀರು ಸರಬರಾಜು ಸುಧಾರಿಸುವ ಕಾಮಗಾರಿಗಳ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಿದೆ.

1. *The Escalation charges should not form part of the estimate. It should be borne by the concerned UIB. The estimate is reduced to such extent.*
2. *The board shall invite the tender immediately after the handing over of the land required under the scheme in order to avoid time and cost run over.*
3. *Adequate provision to be made by the Board in the following Years for timely completion of the Project.*
4. *Water rates as proposed by KUWS 7 DB have to be implemented to meet O & M cost of UGD.*
5. *KTPP provisions, quality control and timely completion should ensured*
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
7. ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : FD 171 Exp-9/2011, ದಿನಾಂಕ : 09–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

PR. 139